# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

' एतज्ज्ञेयं नित्यमेवात्मसंस्थं नातःपरं वेदितव्यं हि किञ्चित् '

ಸಂಪುಟ ೫೩ ಫೆಬ್ರವರಿ ೧೯೮೪ ಸಂಚಿಕೆ ೭

## ವಿಷಯಗಳು



ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦



ಹೊಸಚಂದಾದಾರರನ್ನು ಕೂಡಿಸಿ ಪತ್ರಿಕೆಯನ್ನು ಪ್ರೋತ್ಸಾಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :

ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

February 1984

# ಕಾರ್ಯಾಲಯದ ಸುದ್ದಿ

**ಅನುಷ್ಠಾನಗಳು :** ಶ್ರೀ ಬ್ರಹ್ಮಚೈತನ್ಯಾರಾಧನೆ ಮಹೋತ್ಸವವೂ ಬ್ರಹ್ಮೀಭೂತ ಶ್ರೀ ಜ್ಞಾನಾನಂದೇಂದ್ರಸರಸ್ವತೀಮಹಾಸ್ವಾಮಿಗಳ ಆರಾಧನಾ ಮಹೋತ್ಸವವೂ ಯಶಸ್ವಿಯಾಗಿ ನೆರವೇರಿದವು. ವಿಶೇಷಸಂದರ್ಭಕ್ಕೆ ಬೆಂಗಳೂರಿನಿಂದ ನಿವೃತ್ತ ಪ್ರೊಫೆಸರ್ ಶ್ರೀ ಬಿ. ಭೀಮಸೇನರಾವ್ ಎಂಬವರು ಆಗಮಿಸಿದ್ದು ಉಪನ್ಯಾಸಮಾಡಿದರು. ಆರಾಧನೆಯ ದಿನದಂದು ವೈದಿಕರಿಗೂ ಭಕ್ತವೃಂದದವರಿಗೂ ಸಂತರ್ಪಣೆಯನ್ನು ನಡೆಸಲಾಯಿತು. ದೇವಾಲಯದಲ್ಲಿಯೂ ವಿಶೇಷ ಪೂಜೆಗಳನ್ನು ನೆರವೇರಿಸಿ ಸಮಾಧಿಮಂದಿರ ಹಾಗೂ ದೇವಸ್ಥಾನವನ್ನು ವಿಶೇಷ ವಿದ್ಯುದ್ದೀಪಗಳಿಂದ ಅಲಂಕರಿಸಲಾಗಿತ್ತು. ನೆರೆದಿದ್ದ ಭಕ್ತರೆಲ್ಲರೂ ಸಂತೋಷಗೊಂಡರು.

**ಗ್ರಂಥಪ್ರಕಟನೆ:** 'The Unique Teaching of Shankara' ಎಂಬ ಆಂಗ್ಲ ಭಾಷೆಯ ಪುಸ್ತಕವೊಂದನ್ನು ಪ್ರಕಟಿಸಿದೆ. ಇದು ಈಗ ಭಾಗಭಾಗವಾಗಿ ಪತ್ರಿಕೆಯಲ್ಲಿ ಬರುತ್ತಿರುವ ಗ್ರಂಥದ ಮರಿಅಚ್ಚು (Re-Print) ಆಗಿದೆ. ಆಂಗ್ಲಅನುವಾದಕರಾದ ಶ್ರೀ ಡಿ. ಬಿ. ಗಂಗೊಳ್ಳಿಯವರು ಶ್ರೀಗಳವರ ಕನ್ನಡ ಕೃತಿಯಾದ 'ಅಧ್ಯಾಸಭಾಷ್ಯಾರ್ಥವಿಮರ್ಶೆ' ಎಂಬ ಗ್ರಂಥವನ್ನೇ ಈ ರೂಪದಲ್ಲಿ ಹೊರಗೆಡವಿರುತ್ತಾರೆ. ಇದರ ಮುದ್ರಣವೆಚ್ಚ ಹಾಗೂ ಜವಾಬ್ದಾರಿಗಳನ್ನು ಯಲಹಂಕದ ಶ್ರೀ ಶಂಕರಾಶ್ರಮದವರು ವಹಿಸಿದ್ದಾರೆ. ಡೆಮ್ಮಿ 68 ಪುಟಗಳಿರುವ ಈ ಗ್ರಂಥದ ಬೆಲೆ ರೂ. 3-00;

**ಗ್ರಂಥಮುದ್ರಣ:** 'ಸರ್ವಸಮ್ಮತೋಪದೇಶಗಳು' ಗ್ರಂಥವು ೨೨೪ ಪುಟಗಳು ಅಚ್ಚಾಗಿದೆ. 'ಬೃಹದಾರಣ್ಯಕಭಾಷ್ಯ' ೧೯೬ ಪುಟಗಳು ಅಚ್ಚಾಗಿದೆ.

**ಸಂಪಾದಕರು :** ತಾ॥ 5-1-84 ರಿಂದ 16-1-84ರ ವರೆಗೆ ಬೆಂಗಳೂರು ಕಿಲಾರಿ ರಸ್ತೆ, ರಾಮೇಶ್ವರದೇವಾಲಯದಲ್ಲಿ ಬೆಳಗ್ಗೆ ಹಾಗೂ ಸಂಜೆಯ ವೇಳೆಗಳಲ್ಲಿ ಶ್ರೀಮದ್ಭಾಗವತ ಪ್ರವಚನವನ್ನು ನಡೆಯಿಸಿದರು. ಫೆಬ್ರವರಿ ತಾ॥20 ರಿಂದ ಕೋಲಾರದ ಶಂಕರಸೇವಾಸಂಘದ ಆಶ್ರಯದಲ್ಲಿ ಒಂದು ವಾರ ಕಾಲ ಪ್ರವಚನವನ್ನು ನಡೆಸಲಿದ್ದಾರೆ. ಸ್ಥಳದಲ್ಲಿರುವಾಗ ಕಠೋಪನಿಷತ್ತು, ಗೀತೆ- ಇವುಗಳ ಶಾಂಕರಭಾಷ್ಯಪಾಠಗಳನ್ನು ಮುಂದುವರೆಸುತ್ತಿದ್ದಾರೆ.

**ಕೃತಜ್ಞತೆ :** ಬೆಂಗಳೂರಿನಲ್ಲಿರುವ ಪಂಡಿತ ಶ್ರೀರಾಮನಾಥಸ್ವಾಮಿಗಳು ಮತ್ತು ಬಂಧುಮಿತ್ರರು ಶ್ರೀಮದ್ಭಾಗವತಪ್ರವಚನಮಹೋತ್ಸವಕಾಲಕ್ಕೆ ಎಲ್ಲಾ ಏರ್ಪಾಡುಗಳನ್ನೂ ಸಮರ್ಪಕವಾಗಿ ಮಾಡಿದ್ದರು. ಪ್ರವಚನಕಾರರಿಗೆ ಸೂಕ್ತ ಸಂಭಾವನೆ-ಗೌರವಗಳನ್ನು ಕೃಷ್ಣಾರ್ಪಣಬುದ್ಧಿಯಿಂದ ಸಲ್ಲಿಸಿದರು. ಕಾರ್ಯಾಲಯಕ್ಕೂ ಭಕ್ತವೃಂದದವರಿಂದ ಧನಸಹಾಯವನ್ನು ಒದಗಿಸಿಕೊಟ್ಟು ಉಪಕಾರ ಮಾಡಿರುತ್ತಾರೆ. ನಮ್ಮ ಅಭಿನಂದನೆಗಳು.

———

॥ ಓಮ್ ॥

# ಅಧ್ಯಾತ್ಮಪ್ರಕಾಶ

ಸಂಪುಟ ೫೩]   ವರ್ಷಕ್ಕೆ ರೂ. ೧೫-೦೦ ;  ಬಿಡಿ ಸಂಚಿಕೆಗೆ : ರೂ. ೧.೨೫   [ಸಂಚಿಕೆ ೬

ಫೆಬ್ರುವರಿ-1984

( ಶ್ರೀ ರುಧಿರೋದ್ಗಾರಿಸಂವತ್ಸರದ ಮಾಘ )

## ಅಕ್ಷಿಪುರುಷನ ವಿದ್ಯೆ

**ಓಂ ॥ ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೈತದಮೃತಮಭಯಮೇತದ್ಬ್ರಹ್ಮೇತಿ ತದ್ಯದ್ಯಪ್ಯಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ ॥**

—ಛಾಂದೋಗ್ಯೋಪನಿಷತ್ತು ೪-೧೫-೧.

**ಭಾವಾರ್ಥ :-** ಕಣ್ಣಿನಲ್ಲಿ ಕಾಣಿಸುವ ಈ ಪುರುಷನಿದಾನಲ್ಲ, ಇವನೇ ಆತ್ಮನು ; ಇದೇ ಅಮೃತವು ; ಇದೇ ಅಭಯವು, ಇದೇ ಬ್ರಹ್ಮವು- ಎಂದನು. ಅಲ್ಲಿ ಇದರಲ್ಲಿ ಬೆಣ್ಣೆಯನ್ನಾಗಲಿ, ನೀರನ್ನಾಗಲಿ ಚಿಮುಕಿಸಿದರೂ ಕಡೆ(ಗಣ್ಣು)ಗಳಿಗೇ ಬಂದು ಸೇರುತ್ತದೆ.

[ಉಪಕೋಸಲನಿಗೆ ಗುರುಗಳು ಉಪದೇಶಿಸಿದ ಬ್ರಹ್ಮವಿದ್ಯೆಯನ್ನು ಇಲ್ಲಿ ತಿಳಿಸಿದೆ. ಮೊದಲು ದೇವತೆಗಳಿಂದ ಆತನು ಪಡೆದ ವಿದ್ಯೆಗೆ ಕಿರೀಟಪ್ರಾಯವಾಗಿ ಅಕ್ಷಿಪುರುಷನ ವಿದ್ಯೆಯನ್ನು ಅವರು ತಿಳಿಸಿದರು. ಪರಿಶುದ್ಧವಾದ ಉಪಾಧಿಯಾದ ಕಣ್ಣಿನಲ್ಲಿ ಕಂಡುಬರುವ ಇಂದ್ರಿಯಾನುಗ್ರಾಹಕನಾದ ಪುರುಷನೇ ಅಮೃತಾಭಯಬ್ರಹ್ಮವು- ಎಂದರ್ಥ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಉಪಕೋಸಲವಿದ್ಯೆ-೨

ಹಿಂದಿನ ಸಂಚಿಕೆಯಲ್ಲಿ ಅಗ್ನಿದೇವತೆಗಳು ಒಟ್ಟಾಗಿ ಉಪಕೋಸಲನಿಗೆ ಉಪದೇಶಮಾಡಿರುವ ಬ್ರಹ್ಮವಿದ್ಯೆಯನ್ನು ತಿಳಿಸಿದೆಯಷ್ಟೆ! ಇಲ್ಲಿ ವಿದ್ಯೆ- ಎಂದರೆ ಪ್ರಕರಣಕ್ಕೆ ಹೊಂದುವದಕ್ಕಾಗಿ ಉಪಾಸನೆಯೆಂದರ್ಥಮಾಡಬೇಕು. ಬ್ರಹ್ಮವನ್ನು ಇದ್ದದ್ದು ಇದ್ದಂತೆ ತಿಳಿಯಲಾರದವರಿಗಾಗಿ ಅದೇ ಬ್ರಹ್ಮವನ್ನು ಉಪಾಧಿಸಹಿತವಾಗಿ ವಿವರಿಸಿ ಚಿಂತನೆಮಾಡುವಂತೆ ಶಾಸ್ತ್ರವು ವಿಧಿಸುವದನ್ನು ಉಪಾಸನೆ- ಎಂದು ಕರೆಯುವರು. ಪ್ರಕೃತ- ಉಪಕೋಸಲನಿಗೆ ಅಗ್ನಿದೇವತೆಗಳು ಈಗ ಒಬ್ಬೊಬ್ಬರಾಗಿ ತಮ್ಮತಮ್ಮ ವಿದ್ಯೆಯನ್ನು ಉಪದೇಶಿಸಲಾರಂಭಿಸಿದ್ದಾರೆ. ಅದರ ವಿವರವನ್ನು ತಿಳಿಯೋಣ.

ಮೊದಲನೆಯದಾಗಿ ಗಾರ್ಹಪತ್ಯನೆಂಬ ಅಗ್ನಿದೇವತೆಯು ಉಪದೇಶಮಾಡಿದನು. ಗೃಹಪತಿಯ ಉಪಾಸ್ಯದೇವತೆಯು ಗಾರ್ಹಪತ್ಯನು. ಅಧಿಕಾರಿಯಾದ ಪ್ರತಿಯೊಬ್ಬ ಗೃಹಸ್ಥನೂ ವಿವಾಹಾನಂತರದಲ್ಲಿ ಗಾರ್ಹಪತ್ಯನೆಂಬ ಅಗ್ನಿಯನ್ನು ಇಟ್ಟುಕೊಂಡು ಪ್ರತಿದಿನವೂ ಅಗ್ನಿಹೋತ್ರವೆಂಬ ವೈದಿಕಕರ್ಮವನ್ನು ಮಾಡಬೇಕೆಂದು ಶಾಸ್ತ್ರವಿಧಿಯಿದೆ. ಆಚಾರ್ಯಗೃಹದಲ್ಲಿದ್ದ ಈ ಗಾರ್ಹಪತ್ಯನು ಪ್ರತ್ಯಕ್ಷನಾಗಿ ಉಪಕೋಸಲನನ್ನು ಕುರಿತು "ಅಯ್ಯ ಕೇಳು, ನನಗೆ ಭೂಮಿ, ಅಗ್ನಿ, ಆದಿತ್ಯ, ಅನ್ನ- ಎಬೀ ನಾಲ್ಕು ಶರೀರಗಳಿವೆ. ಹಾಗೂ ಆದಿತ್ಯನಲ್ಲಿರುವ ಪುರುಷನೇ ನಾನು ; ಹೀಗೆಂದು ಉಪಾಸನೆಮಾಡುವವನಿಗೆ ಪೂರ್ಣಾಯುಷ್ಯವೂ ಹೆಸರುವಾಸಿಯಾದ ಜೀವನವೂ ಸಂತತಿಯ ಅಭಿವೃದ್ಧಿಯೂ ಉಂಟಾಗುವದು" ಎಂದು ತಿಳಿಸಿಕೊಟ್ಟನು. ಅನಂತರ ಅನ್ವಾಹಾರ್ಯಪಚನನೆಂಬ ಹೆಸರಿನ ಅಗ್ನಿಯು ಉಪದೇಶಮಾಡಲಾರಂಭಿಸಿದನು. ಈತನನ್ನು ದಕ್ಷಿಣಾಗ್ನಿಯೆಂದೂ ಕರೆಯುವರು. "ಉಪಕೋಸಲನೆ, ಕೇಳು. ನೀರು, ದಿಕ್ಕುಗಳು, ನಕ್ಷತ್ರಗಳು, ಚಂದ್ರ- ಎಂಬಿವೇ ನನ್ನ ನಾಲ್ಕು ಶರೀರಗಳು. ನಾನು ಹೀಗೆ ನಾಲ್ಕು ರೀತಿಯಿಂದ ವಿಭಾಗಿಸಿಕೊಂಡಿರುವೆನು. ಚಂದ್ರನಲ್ಲಿ ಕಂಡುಬರುವ ಪುರುಷನೇ ನಾನು. ಹೀಗೆಂದು ಉಪಾಸನೆಮಾಡುವವನು ಹಿಂದಿನ ಫಲಗಳ ಜೊತೆಗೆ ಚಂದ್ರಲೋಕವನ್ನೂ ಪಡೆದುಕೊಳ್ಳುವನು" ಎಂದು ತಿಳಿಸಿದನು. ಅನಂತರ ಆಹವನೀಯಾಗ್ನಿಯು ಇವನನ್ನು ಕುರಿತು ಹೀಗೆಂದು ಉಪದೇಶಮಾಡಿದನು : "ಅಯ್ಯ ಬ್ರಹ್ಮಚಾರಿಯೆ, ಕೇಳು ; ಪ್ರಾಣ, ಆಕಾಶ, ದ್ಯುಲೋಕ, ವಿದ್ಯುತ್- ಎಂಬಿವು ನನ್ನ ನಾಲ್ಕು ಶರೀರಗಳು. ವಿದ್ಯುತ್ತಿನಲ್ಲಿ ಕಂಡುಬರುವ ಪುರುಷನೇ ನಾನು. ಹೀಗೆಂದು ಉಪಾಸನೆಮಾಡುವವನು ಹಿಂದಿನಂತೆಯೇ ಫಲಗಳನ್ನು ಪಡೆದುಕೊಳ್ಳುವನಲ್ಲದೆ ವಿದ್ಯುಲ್ಲೋಕವನ್ನೂ ಹೊಂದುವನು"- ಎಂದು ವಿವರಿಸಿ

ದನು. ಈ ರೀತಿಯಾಗಿ ತ್ರೇತಾಗ್ನಿಗಳಿಂದ ಉಪದೇಶವನ್ನು ಹೊಂದಿದ ಉಪಕೋಸಲನಿಗೆ ಕಡೆಯಲ್ಲಿ ಅಗ್ನಿಗಳು ಒಟ್ಟಾಗಿ ಹೇಳಿದ್ದೇನೆಂದರೆ: "ಸೋಮ್ಯ, ಇದೇ ನಮ್ಮಗಳ ವಿದ್ಯೆ; ಹಾಗೂ ಆತ್ಮವಿದ್ಯೆಯೆಂದರೂ ಇದೇ. ಇನ್ನು ನಿನಗೆ ಮುಂದಿನ ವಿಚಾರವನ್ನು ಗುರುವೇ ಉಪದೇಶಿಸಲಿರುವನು" ಎಂದು ಹೇಳಿ ಸುಮ್ಮನಾದವು. ಹಿಂದೆ ಹೇಳಿದ ಪ್ರಾಣವೇ ಬ್ರಹ್ಮವು, ಕಂ ಬ್ರಹ್ಮವು, ಖಂ ಬ್ರಹ್ಮವು- ಎಂಬುದೇ ಆತ್ಮವಿದ್ಯೆಯು. ಆದರೆ ಈ ಎಲ್ಲಾ ವಿದ್ಯೆಗಳಿಗೂ ಗತಿಯನ್ನು ಉಪದೇಶಮಾಡಬೇಕಾಗಿದೆ. ಅದನ್ನು ಆಚಾರ್ಯನೇ ನಿನಗೆ ಹೇಳಿಕೊಡಲಿರುವನು- ಎಂದೂ ಅಗ್ನಿದೇವತೆಗಳು ತಿಳಿಸಿದರು. ಉಪಾಸನೆಯಲ್ಲಿ ಗತಿಯನ್ನೂ ಧ್ಯಾನ ಮಾಡಬೇಕು. ಹಾಗಾದರೆ ಫಲವು ನಿಶ್ಚಯವಾಗಿ ಆಗುವದು. ಅದಕ್ಕಾಗಿ ಉಪಕೋಸಲನು ಆಚಾರ್ಯರ ಮನೆಯಲ್ಲಿಯೇ-ಅವರು ಪ್ರವಾಸದಿಂದ ಹಿಂದಿರುಗಿ ಬರುವವರೆಗೂ- ಕಾದುಕೊಂಡಿದ್ದನು. ಮುಂದೇನಾಯಿತೆಂಬುದನ್ನು ತಿಳಿಯೋಣ.

ಆಚಾರ್ಯನು ಮನೆಗೆ ಹಿಂದಿರುಗಿದ ಕೂಡಲೆ 'ಉಪಕೋಸಲನೆ' ಎಂದು ಕರೆದನು. 'ಪೂಜ್ಯರೆ, ಇಲ್ಲಿರುವೆನು' ಎಂದು ಶಿಷ್ಯನು ಉತ್ತರಿಸಿದನು. ಗುರುವು 'ನೀನು ಬ್ರಹ್ಮವಿದನಂತೆ ಕಂಡುಬರುತ್ತಿರುವೆ; ಏಕೆಂದರೆ ನಿನ್ನ ಮುಖವು ತೇಜಸ್ವಿಯಾಗಿದೆ, ನಿನಗೆ ಯಾರು ಬ್ರಹ್ಮೋಪದೇಶವನ್ನು ಮಾಡಿದರು ?' ಎಂದು ಕೇಳಿದನು. ಆಗ ಅವನು 'ಸ್ವಾಮಿ, ನನಗೆ ಬೇರೆಯಾರು ತಾನೆ ಉಪದೇಶಮಾಡಿಯಾರು ? ಇವೇ (ಅಗ್ನಿಗಳೇ) ನಿಜವಾಗಿ ಉಪದೇಶಮಾಡಿವೆ' ಎಂದನು. ಆಗ ಆಚಾರ್ಯನು 'ಏನನ್ನು ಉಪದೇಶಮಾಡಿವೆ, ಹೇಳು' ಎಂದನು. ಆಗ ಉಪಕೋಸಲನು ಅಗ್ನಿದೇವತೆಗಳು ಹೇಳಿಕೊಟ್ಟದ್ದನ್ನೆಲ್ಲ ಗುರುಗಳ ಬಳಿಯಲ್ಲಿ ಒಪ್ಪಿಸಿದನು. ಅನಂತರ ಗುರುಗಳು 'ಅಪ್ಪ, ನಿನಗೆ ಇವು ಲೋಕಗಳನ್ನು ಹೇಳಿರುತ್ತವೆ. ಆದರೆ ಪೂರ್ಣವಾಗಿ ಬ್ರಹ್ಮವನ್ನು ತಿಳಿಸಿರುವದಿಲ್ಲ. ಹೇಗೆಂದರೆ: ಬ್ರಹ್ಮಜ್ಞಾನದ ಮಹಿಮೆಯನ್ನು ಕೇಳು. ತಾವರೆಯ ಎಲೆಯು ನೀರಿನಲ್ಲಿದ್ದರೂ ಹೇಗೆ ಅದಕ್ಕೆ ನೀರು ಅಂಟಿಕೊಳ್ಳುವದಿಲ್ಲವೋ ಮತ್ತು ಅದು ಒದ್ದೆಯಾಗುವದಿಲ್ಲವೋ ಹಾಗೆ ಬ್ರಹ್ಮವನ್ನು ಅರಿತುಕೊಂಡವನಲ್ಲಿ ಪಾಪಗಳು ಅಂಟಿಕೊಳ್ಳುವದಿಲ್ಲ' ಎಂದನು. ಆಗ ಶಿಷ್ಯನು 'ಪೂಜ್ಯರೆ, ಆ ಬ್ರಹ್ಮತತ್ತ್ವವನ್ನು ಪೂರ್ಣವಾಗಿ ನನಗೆ ಉಪದೇಶಿಸಬೇಕು' ಎಂದು ಬೇಡಿಕೊಳ್ಳಲು ಆಚಾರ್ಯನು ಹೀಗೆ ಹೇಳಲಾರಂಭಿಸಿದನು.

"ಬ್ರಹ್ಮಚರ್ಯಾದಿಸಾಧನಸಂಪನ್ನರೂ ಇಂದ್ರಿಯಗಳನ್ನು ಪ್ರತ್ಯಾಹಾರ ಮಾಡಿಕೊಂಡು ಒಳಗೇ ನೋಡುವವರೂ ಶಾಂತರೂ ವಿವೇಕಿಗಳೂ ಆದ ಸಾಧಕರಿಗೆ ಕಣ್ಣಿನಲ್ಲಿ ಕಾಣುವ ದೃಷ್ಟಿಯ ದ್ರಷ್ಟೃವೂ, ಕಣ್ಣಿಗೇ ಕಣ್ಣೂ ಆಗಿರುವ ಈ ಪುರುಷನಿರುವನಲ್ಲ, ಅವನೇ ಅಮೃತವೂ ಅಭಯವೂ ಆದ ಬ್ರಹ್ಮವು'- ಎಂದು ಆಚಾರ್ಯನು ನುಡಿಯಲಾಗಿ ಶಿಷ್ಯನು ಕೃತಕೃತ್ಯನಾದನು. ಇದೇ ಬ್ರಹ್ಮವಿದ್ಯೆಯ ಸಾರವು. ಈ ಅಕ್ಷಿಪುರುಷನನ್ನು ಕುರಿತು ಶ್ರುತಿಯು ಈಗ ತನ್ನ ವಿವರಣೆಯನ್ನು

ತಿಳಿಸಲಿದೆ. ಹೇಗೆಂದರೆ : ಕಣ್ಣು ಎಂಬುದು ಮನುಷ್ಯನ ಇಂದ್ರಿಯಗಳಲ್ಲಿ ಪ್ರಧಾನವಾದುದು. ಹಾಗೂ ಯಾವಾಗಲೂ ಸ್ವಚ್ಛವಾದುದು. ಅದರಲ್ಲಿ ಕಸವೇನಾದರೂ ಸೇರಿದ್ದೇ ಆದರೆ ಅದನ್ನು ಹೋಗಲಾಡಿಸುವವರೆಗೂ ಕಣ್ಣು ತನ್ನ ಕೆಲಸವನ್ನು ಮಾಡುವದಿಲ್ಲ. ಹೀಗೆ ಉಳಿದ ಇಂದ್ರಿಯಗಳಿಗಿಂತ ಇದು ಸ್ವಚ್ಛವೂ ಪರಿಶುದ್ಧವೂ ಆಗಿದೆ. ಇದಕ್ಕೆ ಯಾವ ಕೊಳೆ(Foreign Matter)ಯ ಸಂಪರ್ಕವೂ ಇರುವಂತಿಲ್ಲ. ಏಕೆಂದರೆ ಇದು ಭಗವಂತನ ವಾಸಸ್ಥಾನವು. ಸ್ಥಾನಕ್ಕೇ ಇಷ್ಟು ಮಹಿಮೆಯಿರುವಲ್ಲಿ ಇನ್ನು ಈ ಸ್ಥಾನದಲ್ಲಿರುವ ಪುರುಷನ ಮಹಿಮೆಯನ್ನು ಹೇಳತಕ್ಕದ್ದೇನಿದೆ ? ಆದ್ದರಿಂದಲೇ ಈ ಪುರುಷನನ್ನು ಅರಿತುಕೊಂಡವರಿಗೆ ಪಾಪಗಳ ಅಂಟಿಲ್ಲವೆಂದೂ ತಿಳಿಸಲಾಗಿದೆ. ಹೇಗೆ ಕಣ್ಣಿಗೆ ಸ್ವಲ್ಪ ನೀರನ್ನಾಗಲಿ, ಬೆಣ್ಣೆಯನ್ನಾಗಲಿ ಚಿಮುಕಿಸಿದರೆ ಅದು ಕಡೆಗಣ್ಣುಗಳಿಗೇ (ತುದಿಗೇ) ಬಂದುಬಿಡುವದು. ಕಣ್ಣಿನಲ್ಲಿ ನಿಲ್ಲುವದಿಲ್ಲ. ಇದೇ ಕಣ್ಣಿನ ಮಾಹಾತ್ಮ್ಯವು. ಇಂಥ ಸ್ಥಾನದಲ್ಲಿರುವ ಪರಿಶುದ್ಧನೂ ಇಂದ್ರಿಯಾನುಗ್ರಾಹಕನೂ ನಿತ್ಯನೂ ನಿರಂಜನನೂ ಸತ್ಯನೂ ಆದ ಪರಮಪುರುಷನೇ ಎಲ್ಲರ ಆತ್ಮನೆನಿಸಿರುವನು. ಇವನೇ ಅಮೃತಾಭಯನಾದ ಬ್ರಹ್ಮವು. ಇವನೇ ಎಲ್ಲಾ ದೇವತೆಗಳೊಡೆಯನು ; ಹಾಗೂ ಲೋಕಗಳ, ಕಾಮಗಳ ಒಡೆಯನೂ ಆಗಿರುವನು– ಎಂದು ಶ್ರುತಿಯಲ್ಲಿ ವರ್ಣಿಸಿದೆ.

ಈಗ ಇದೇ ಅಕ್ಷಿಪುರುಷನ ಹೆಚ್ಚಿನ ಮಹಿಮೆಗಳನ್ನು ತಿಳಿಯೋಣ. ಇವನಿಗೆ ಸಂಯದ್ವಾಮನೆಂಬ ಹೆಸರಿದೆ. ವಾಮಾನಿ– ಎಂದರೆ ಕಾಮಗಳು ಎಂದರ್ಥ. ಎಲ್ಲಾ ಕಾಮಗಳೂ ಈತನನ್ನೇ ಬಂದುಸೇರುತ್ತವೆಯಾದ್ದರಿಂದ ಈ ಹೆಸರು ಬಂದಿದೆ. ವಿಷ್ಣುಸಹಸ್ರನಾಮಸ್ತೋತ್ರದಲ್ಲಿ ಭಗವಂತನನ್ನು ಕಾಮಕೃತ್, ಕಾಮಪ್ರದ– ಎಂದೇ ಹೊಗಳಲಾಗಿದೆ. ಯಾರು ಈ ಕಾಮಗಳ ಪ್ರಭುವನ್ನು ಚಿಂತಿಸುವರೋ ಅಂಥವರ ಸಕಲ ಇಷ್ಟಾರ್ಥಗಳೂ ಕೈಗೂಡುವವು. ಹಾಗೆಯೇ ಈ ಪುರುಷನಿಗೆ 'ವಾಮನೀ' ಎಂಬ ಹೆಸರೂ ಇದೆ–ಎಂದು ಶ್ರುತಿಯು ತಿಳಿಸುತ್ತಿದೆ. ವಾಮಗಳೆಂದರೆ ಕಾಮಗಳೆಂದು ಪ್ರಸಿದ್ಧವಷ್ಟೆ. ಆಯಾ ಕರ್ತೃಗಳ ಕರ್ಮಗಳಿಗೆ ತಕ್ಕ ಫಲಗಳನ್ನು ಈತನೇ ಉಂಟುಮಾಡಿ ಪ್ರಾಣಿಗಳನ್ನು ತಮ್ಮತಮ್ಮ ಸುಖಾದಿಗಳಲ್ಲಿ ನೆಲೆಗೊಳ್ಳುವಂತೆಯೂ ಪಡೆದುಕೊಳ್ಳುವಂತೆಯೂ ಈತನೇ ಮಾಡುತ್ತಾನಾದ್ದರಿಂದ ವಾಮನಿಯೆನಿಸಿರುವನು. ಇದರಿಂದ ಕರ್ಮಗಳು ತಾವೇ ಸ್ವತಂತ್ರವಾಗಿ ಫಲವನ್ನು ಕೊಡಲಾರವೆಂದೂ ಫಲಪ್ರದನಾದ ಈಶ್ವರನು ಬೇರೆಯಾಗಿರಬೇಕೆಂದೂ ಸಿದ್ಧವಾಗುತ್ತದೆ. ಹೇಗೆ ಒಂದು ಅಂಗಡಿಗೆ ಹೋದರೆ ನಮ್ಮ ಹಣವನ್ನು ತೆಗೆದುಕೊಂಡು ನಮಗೆ ಬೇಕಾದ ಪದಾರ್ಥವನ್ನು ಕೊಡಲು ಒಬ್ಬನಿರುವನೋ, ಅವನು ಪದಾರ್ಥಗಳಿಗಿಂತ ಬೇರೆಯಾಗಿದ್ದು ಅವುಗಳ ಬೆಲೆಯನ್ನೂ ಇರುವಿಕೆಯನ್ನೂ ತಿಳಿದವನಾಗಿದ್ದು ಅವುಗಳ ಒಡೆಯನಾಗಿರುವನೋ, ಆದರೆ ಅಂಥವನಿಲ್ಲವಾದರೆ ವ್ಯಾಪಾರವೇ ನಡೆಯಲಾರದೋ ಹಾಗೆಯೇ ಪ್ರಾಣಿಗಳ ಜಗದ್ವ್ಯಾಪಾರವು ನಡೆಯಲು ಈಶ್ವರನೊಬ್ಬನು ಬೇಕೇಬೇಕು. ಆತನೇ ವಾಮನಿಯೆಂದು ಸ್ತುತಿಸಲ್ಪಟ್ಟಿರುವನು.

ಇಂಥ ಸ್ವತಂತ್ರನೂ ಕರ್ಮಫಲದಾತನೂ ಆಗಿರುವ ಮಹಾಪುರುಷನೇ ಅಕ್ಷಿಯಲ್ಲಿಯೂ ಇದ್ದಾನೆ ಎಂದು ಚಿಂತಿಸಬೇಕು.

ಈಗ ಶ್ರುತಿಯು ಮುಂದುವರೆದು ಆ ಪುರುಷನ ಮಹಿಮೆಯನ್ನು ಮತ್ತಷ್ಟು ವಿವರಿಸುತ್ತಿದೆ. ಹೇಗೆಂದರೆ: ಈತನೇ ಭಾಮನಿಯೂ ಆಗಿದ್ದಾನೆ. ಭಾ ಎಂದರೆ ಪ್ರಕಾಶವು. ಎಲ್ಲಾ ಲೋಕಗಳಲ್ಲಿಯೂ ಸೂರ್ಯ, ಚಂದ್ರ, ಅಗ್ನಿ, ವಿದ್ಯುತ್, ನಕ್ಷತ್ರಾದಿಗಳ ರೂಪದಿಂದ ಬೆಳಗುತ್ತಿರುವವನು ಈತನೇ. ಇವನ ಬೆಳಕಿನಿಂದಲೇ ಎಲ್ಲವೂ ತೇಜೋಮಯವಾಗಿರುವವು. ಹೀಗೆ ಸೂರ್ಯಾದಿಗಳಿಗೆ ಬೆಳಕನ್ನು ನೀಡುವವನೂ ಒಳಗೆ ಅಂತರ್ಜ್ಯೋತಿಯಾಗಿ ಬೆಳಗುತ್ತಿರುವವನೂ ಈತನೇ. ಆದ್ದರಿಂದ ಭಾಮನಿಯೆನಿಸಿರುವನು. ಇವನನ್ನು ಈವರೆಗೆ ತಿಳಿಸಿದಂತೆ ಎಲ್ಲಾ ಗುಣವಿಶೇಷಗಳಿಂದಲೂ ಕೂಡಿ ಅಕ್ಷಿಸ್ಥಾನದಲ್ಲಿ ಯಾರು ಉಪಾಸನೆಮಾಡುವರೋ ಅಂಥ ಬ್ರಹ್ಮೋಪಾಸಕರು ಕ್ರಮಮುಕ್ತಿಯನ್ನೇ ಹೊಂದುವರು. ಉಳಿದ ಕರ್ಮಿಗಳಂತೆ ಫಲಭೋಗವು ಪೂರೈಸಿದಮೇಲೆ ಮತ್ತೆ ಸಂಸಾರಮಂಡಲಕ್ಕೆ ಹಿಂದಿರುಗುವದಿಲ್ಲ-ಎಂದು ಶ್ರುತಿಯಲ್ಲಿ ತಿಳಿಸಿರುತ್ತದೆ.

ಇಂಥ ಬ್ರಹ್ಮೋಪಾಸಕರ ಹೆಚ್ಚುಗಾರಿಕೆಯನ್ನು ಈಗ ತಿಳಿಸಲಾಗುವದು. ಸಾಮಾನ್ಯವಾಗಿ ಕರ್ಮಕಾಂಡದ ನಿಯಮದಂತೆ ಮೃತರಾದವರಿಗೆ ಶವಸಂಸ್ಕಾರವನ್ನು ಅಧಿಕಾರಿಗಳಾದ ಪುತ್ರಾದಿಗಳು ಮಾಡಬೇಕಾಗುವದು. ಇಲ್ಲವಾದರೆ ಅಂಥವರಿಗೆ ಸದ್ಗತಿಯು ದೊರೆಯುವದಿಲ್ಲ- ಎಂದು ಶಾಸ್ತ್ರಪ್ರಮಾಣದಿಂದ ತಿಳಿದು ಬರುತ್ತದೆ. ಈ ಸಂಯದ್ವಾಮತ್ವಾದಿಗುಣವಿಶಿಷ್ಟವಾದ ಬ್ರಹ್ಮವನ್ನು ಉಪಾಸನೆ ಮಾಡಿದವರಿಗೆ-ಅವರ ಮರಣಾನಂತರ ಪುತ್ರಾದಿಗಳು ಅಂತ್ಯೇಷ್ಟಿಯನ್ನು ಮಾಡಲಿ, ಮಾಡದೆ ಇರಲಿ- ಅವರು ಸದ್ಗತಿಯನ್ನೇ ಪಡೆಯುತ್ತಾರೆ- ಎಂದು ವಿಶೇಷವಾಗಿ ತಿಳಿಸಿದೆ. ಏಕೆಂದರೆ ಉಪಾಸನೆಯ ಪ್ರಭಾವದಿಂದ ಅವರ ಪ್ರಯಾಣಮಾರ್ಗವು ಸಿದ್ಧವಾಗಿಬಿಟ್ಟಿರುವದು. ಇಂಥವರು ಶರೀರತ್ಯಾಗಮಾಡಿದ ಕೂಡಲೆ ಅಗ್ನಿಯ ಜ್ವಾಲೆಗಳ ಅಭಿಮಾನಿದೇವತೆಯನ್ನು ಸೇರುತ್ತಾರೆ. ಅನಂತರ ಅಹರ್ದೇವತೆ, ಶುಕ್ಲಪಕ್ಷದೇವತೆ, ಮಾಸಸಂವತ್ಸರದೇವತೆಗಳು, ಆದಿತ್ಯ, ಚಂದ್ರ, ವಿದ್ಯುತ್ ದೇವತೆಗಳನ್ನು ಕ್ರಮವಾಗಿ ಸೇರಿಬಿಡುವರು. ಅಲ್ಲಿರುವಾಗ ಒಬ್ಬ ದಿವ್ಯಪುರುಷನು ಬ್ರಹ್ಮಲೋಕದಿಂದ ಬಂದು ಇಂಥವರನ್ನೆಲ್ಲ ಒಯ್ದು ಹಿರಣ್ಯಗರ್ಭನ ಬಳಿಗೆ ಬಿಡುವನು. ಆ ಸತ್ಯಲೋಕದಲ್ಲಿ ಭೋಗವು ಪೂರೈಸುವವರೆಗೂ ಇದ್ದುಕೊಂಡವರಾಗಿ ಅನಂತರ ಅಲ್ಲಿಯ ಸನ್ನಿವೇಶ ವಿಶೇಷಗಳಿಂದ ಬ್ರಹ್ಮಜ್ಞಾನವನ್ನೇ ಪಡೆದುಕೊಂಡು ಬ್ರಹ್ಮನೊಡಗೂಡಿ ಕಲ್ಪಾಂತದಲ್ಲಿ ಮುಕ್ತರಾಗಿಬಿಡುವರು. ಇಂಥವರು ಸಂಸಾರಗತಿಗಳಿಗೆ ಮರಳಿ ಬರುವದಿಲ್ಲ. ಇದಕ್ಕೆ ಕ್ರಮಮುಕ್ತಿ ಎಂದು ಹೆಸರು. ಸತ್ಯಕಾಮರೆಂಬ ಆಚಾರ್ಯರು ಹೀಗೆ ಉಪದೇಶಿಸಿ ಉಪಕೋಸಲನನ್ನು ಕೃತಾರ್ಥನನ್ನಾಗಿ ಮಾಡಿರುತ್ತಾರೆ.

—— ——

## ಸಾಮಾನ್ಯನೀತಿ

**ಸಂತೋಷಪ್ಲುತಯೋ ಪುಂಸಾಮಾಕಸ್ಮಿಕಧನಾಗಮಃ ।**
**ಸರಸಾಂ ಸೇತುಭೇದಾಯ ವರ್ಷೌಘಃ ಸ ಚ ನ ಸ್ಥಿರಃ ॥೧॥**

೧. ಮಳೆಗಾಲದಲ್ಲಿ ಬರುವ ನದಿಗಳ ಪ್ರವಾಹವು ಒಡ್ಡು(ಸೇತುವೆ)ಗಳನ್ನು ಕೊಚ್ಚಿಹಾಕುವದೇ ಹೊರತು ಶಾಶ್ವತವಾಗಿರುವದಿಲ್ಲ. ಹಾಗೆಯೇ ಅಕಸ್ಮಾತ್ತಾಗಿ (ಮನುಷ್ಯನಿಗೆ) ಒದಗುವ ಹಣವು ಅವನ ಸಂತೋಷವನ್ನು ಹಾಳುಮಾಡಬಲ್ಲದೇ ಹೊರತು (ಸುಖವನ್ನುಂಟುಮಾಡುವದಿಲ್ಲ).

**ಸಂತುಷ್ಯತ್ಯುತ್ತಮಃ ಸ್ತುತ್ಯಾ ಧನೇನ ಮಹತಾಧಮಃ ।**
**ಪ್ರಸೀದಂತಿ ಜಪೈರ್ದೇವಾ ಬಲಿಭಿರ್ಭೂತವಿಗ್ರಹಾಃ ॥೨॥**

೨. ಸ್ತುತಿಮಾಡಿದ್ದರಿಂದಲೇ ಉತ್ತಮ (ವ್ಯಕ್ತಿಯು) ಸಂತೋಷಗೊಳ್ಳುವನು. ಅಧಮನಾದವನು ಹೆಚ್ಚಿನ ಹಣವನ್ನು ತೆರುವದರಿಂದ ತೃಪ್ತನಾಗುವನು. ದೇವತೆಗಳಾದರೊ, (ಮಂತ್ರ) ಜಪದಿಂದಲೇ ಸಂತುಷ್ಟರಾಗುವರು. ಭೂತಗಳೂ ಬೊಂಬೆಗಳೂ ಬಲಿಪ್ರದಾನದಿಂದ ಸಂತೋಷಪಡುವವು.

**ಸ್ವಜಾತೀಯವಿಘಾತಾಯ ಮಾಹಾತ್ಮ್ಯಂ ದೃಶ್ಯತೇ ನೃಣಾಮ್ ।**
**ಶ್ಯೇನೋ ವಿಹಂಗಮಾನೇವ ಹಿನಸ್ತಿ ನ ಭುಜಂಗಮಾನ್ ॥೩॥**

೩. ಗಿಡುಗನು (ಪಾರಿವಾಳವೇ ಮುಂತಾದ) ಹಕ್ಕಿಗಳನ್ನು ಹಿಂಸಿಸುತ್ತದೆಯೇ ಹೊರತು (ಹೆಚ್ಚಾಗಿ) ಹಾವುಗಳನ್ನು ಹಿಂಸಿಸುವದಿಲ್ಲ. ಹಾಗೆಯೇ ಮನುಷ್ಯರು ಸಹ ತಮ್ಮ ಸ್ವಜನ (ಸ್ವವೃತ್ತಿಯವ)ರನ್ನೇ ಪೀಡಿಸುವದರಿಂದ ತಮ್ಮ ಮಾಹಾತ್ಮ್ಯೆಯನ್ನು ಕೊಚ್ಚಿಕೊಳ್ಳುವರು.

**ಗುರುಂ ಪ್ರಯೋಜನೋದ್ದೇಶಾದರ್ಚಯಂತಿ ನ ಭಕ್ತಿತಃ ।**
**ದುಗ್ಧದಾತ್ರೀತಿ ಗೌರ್ಗೇಹೇ ಪೋಷ್ಯತೇ ನ ತು ಧರ್ಮತಃ ॥೪॥**

೪. ಜನರು ಹಸುವನ್ನು ಹಾಲುಕೊಡುತ್ತದೆ-ಎಂಬುದಕ್ಕಾಗಿ ಸಾಕುವರೇ ಹೊರತು ಗೋಸೇವೆಯೆಂಬ ಧರ್ಮಕ್ಕೆ ಕಟ್ಟುಬಿದ್ದು ಕರ್ತವ್ಯದೃಷ್ಟಿಯಿಂದಲ್ಲ. ಹಾಗೆಯೇ ಗುರುವನ್ನೂ ತಮ್ಮ ಸ್ವಂತಪ್ರಯೋಜನಕ್ಕಾಗಿ ಪೂಜಿಸುವರೇ ಹೊರತು ಭಕ್ತಿಯಿಂದಲ್ಲ.

**ಕಾಮಾಯ ಸ್ಪೃಹಯತ್ಯಾತ್ಮಾ ಸಂಯತೋಽಪಿ ಮನೀಷಿಣಃ ।**
**ವೀಥೀನಿಯಮಿತೋಽಪ್ಯುಕ್ಷಾ ಶಷ್ಪಮಾಸಾದ್ಯ ಧಾವತಿ ॥೫॥**

೫. ಜ್ಞಾನನಾದ ಹಾಗೂ ಇಂದ್ರಿಯನಿಗ್ರಹವುಳ್ಳವನ ಮನಸ್ಸುಕೂಡ ಕಾಮಕ್ಕೆ ವಶವಾಗುವದು. ಹೇಗೆಂದರೆ ರಸ್ತೆಯನ್ನು ನಡೆಯುವದಕ್ಕಾಗಿ (ಗಾಡಿಗೆ) ಕಟ್ಟಲ್ಪಟ್ಟ ಎತ್ತುಕೂಡ ಚಿಗುರು ಗರಿಕೆಗಳನ್ನು ಕಂಡಾಗ ಅತ್ತಗಡೆಗೇ ಓಡುವದು.

---

# ಸತ್ಯಕಾಮನ ಪತ್ರಗಳು

## ಭಾಗವತಸಪ್ತಾಹ

"ಭಾಗವತಸಪ್ತಾಹ"ವೆಂಬ ಅನುಷ್ಠಾನವನ್ನು ಕೆಲವರು ನಡೆಯಿಸುವದನ್ನು ಕೇಳಿದ್ದೇನೆ. ಈಚೆಗೆ ತಾವೂ ಸಹ ಅಂಥ ಉತ್ಸವವೊಂದರಲ್ಲಿ ಭಾಗವಹಿಸಿದ್ದಿರಿ-ಎಂದು ತಿಳಿಯಿತು. ಆ ಉತ್ಸವದ ವಿಶೇಷವೇನು? ಏತಕ್ಕೆ ಮಾಡಬೇಕು? ಹೇಗೆ ಮಾಡಬೇಕು- ಮುಂತಾದ ವಿವರಗಳನ್ನು ತಿಳಿದುಕೊಳ್ಳಲು ನನಗೆ ಆಸಕ್ತಿಯಿದೆ. ಇದನ್ನು ಸಾಮೂಹಿಕವಾಗಿ ಆಚರಿಸಬೇಕೆ? ಇದರಲ್ಲಿ ಮುಖ್ಯವಾದ ಭಾಗವು ಯಾವದು? ಯಾವ ದೇವತೆಯನ್ನು ಈ ಅನುಷ್ಠಾನದಲ್ಲಿ ಆರಾಧಿಸಬೇಕು? ತಿಳಿಸುವಿರಾ? ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ.

ನಾನು ಈಚೆಗೆ ಒಂದು ಭಾಗವತಸಪ್ತಾಹದಲ್ಲಿ ಭಾಗವಹಿಸಿದ್ದುದು ನಿಜ. ಶ್ರೀಮದ್ಭಾಗವತಕಥೆಯನ್ನು ಪ್ರತಿದಿನವೂ ಎರಡು ವೇಳೆಗಳಲ್ಲಿಯೂ ಕನ್ನಡದಲ್ಲಿ ಪ್ರವಚನ ಮಾಡುವದಕ್ಕಾಗಿ ಹೋಗಿದ್ದೆನು. ಏಳು ದಿನಗಳ ಅನಂತರವೂ ಮೂರು ದಿನಗಳು ಅಧಿಕವಾಗಿ ಉತ್ಸವವು ನೆರವೇರಿತು. ಮುಖ್ಯವಾಗಿ ಇದರಲ್ಲಿ ಕಥಾಶ್ರವಣವೇ ಸರ್ವಸಾರವಾಗಿತ್ತು. ಏಕೆಂದರೆ ಭಕ್ತಿಶಾಸ್ತ್ರದವರು ವಿವರಿಸುವಂತೆ ನವವಿಧಭಕ್ತಿಗಳಲ್ಲಿ ಶ್ರವಣಭಕ್ತಿಯೇ ಮುಕ್ತಿಗೆ ಮೊದಲನೆಯ ಸೋಪಾನವಾಗಿದೆ. ವಿಪ್ರಶಾಪಕ್ಕೆ ಗುರಿಯಾಗಿದ್ದ ಪರೀಕ್ಷಿದ್ರಾಜನು ಏಳು ದಿನಗಳ ಕಾಲದ ತನ್ನ ಆಯುಷ್ಯಾವಧಿಯಲ್ಲಿ ಶ್ರೀ ಶುಕಮಹಾಮುನಿಗಳಿಂದ ಭಗವತ್‌ಕಥೆಯನ್ನು ಶ್ರವಣ ಮಾಡಿ ಮುಕ್ತನಾದನೆಂಬ ಸಂಪ್ರದಾಯವೇ ಭಾಗವತಸಪ್ತಾಹಕ್ಕೆ ಮೂಲವಾಗಿದೆ. ಆದ್ದರಿಂದ ಜೀವಮಾನದ ಅವಧಿಯಲ್ಲಿ ಪ್ರತಿಯೊಬ್ಬನೂ ಒಮ್ಮೆಯಾದರೂ ಏಳು ದಿನಗಳ ಕಾಲ ಭಾಗವತವನ್ನು ಶ್ರವಣಮಾಡಲೇಬೇಕು. ಪರೀಕ್ಷಿದ್ರಾಜನನ್ನು ಮಾತ್ರವೇ ಅಲ್ಲ. ಪ್ರತಿಯೊಬ್ಬ ಜೀವನನ್ನೂ ಸಂಸಾರವೆಂಬ ಮಹಾಸರ್ಪವು ಕಡಿದಿರುವ ಸಂಭವವಿರುತ್ತದೆ. ಹಾಗೆಯೇ ಜೀವರುಗಳೆಲ್ಲರಿಗೂ ಭಾನುವಾರದಿಂದ ಶನಿವಾರದವರೆಗಿನ ಏಳುದಿನಗಳು ಮಾತ್ರವೇ ಜೀವಿತಾವಧಿಯಿರುತ್ತದೆ. ಕಾಲಜ್ಞರು ಒಂದು ನಿಜವಾದ ಭವಿಷ್ಯವನ್ನು ಹೀಗೆ ನುಡಿದಿದ್ದಾರೆ: 'ಎಲ್ಲ ಮಾನವರೂ ಭಾನುವಾರದಿಂದ ಶನಿವಾರದೊಳಗೆ ಒಂದು ದಿನ ಸಾಯುವದು ನಿಶ್ಚಿತ.' ಈ ಭವಿಷ್ಯವು ಸರ್ವರೀತಿಯಿಂದಲೂ ನಿಜವಾಗಿಯೇ ಇರುತ್ತದೆ. ಏಕೆಂದರೆ ಮಾನವನ ಮೃತಿ ದಿನವು ಏಳರಲ್ಲಿ ಒಂದು ವಾರವಾಗಿರುವದು ಅನಿವಾರ್ಯವಾಗಿದೆ. ಆದ್ದರಿಂದ ಆಯುಷ್ಯಾವಧಿಯನ್ನೆಲ್ಲ ವಾರದ (೭ ದಿನಗಳು) ವ್ಯಾಪಿಸಿರುವದರಿಂದ ಕಾಲಸರ್ಪದ ದಂಶನದಿಂದ ಸಾಯಲಿರುವ ಮಾನವನು ಅಮೃತಮಯವಾದ ಭಾಗವತಶ್ರವಣದಿಂದ ತನ್ನ ಸಾವನ್ನು ದಾಟಿ ಎಂದೆಂದಿಗೂ ಹುಟ್ಟದೆ ಸಾಯದೆ ಇರುವಂಥ ಮುಕ್ತಸ್ಥಿತಿಯನ್ನು ಪಡೆಯಬಹುದಾಗಿದೆ.

ಈಗ ಇದನ್ನು ನಡೆಯಿಸುವ ಕ್ರಮವನ್ನು ಸ್ವಲ್ಪಮಟ್ಟಿಗೆ ತಿಳಿಸುವೆನು. ಭಾಗವತಮಾಹಾತ್ಮ್ಯ- ಮುಂತಾದ ಗ್ರಂಥಗಳಲ್ಲಿ ಈ ಸಪ್ತಾಹದ ವಿವರವನ್ನು ಬೇರೆಬೇರೆಯಾಗಿ ತಿಳಿಸಿದ್ದಾರೆ. ಮುಖ್ಯವಾಗಿ ಶುಕಮಹಾಮುನಿಗಳಂಥ ವಿರಕ್ತನೂ ಭಗವದ್ಭಕ್ತನೂ ಶಾಸ್ತ್ರಜ್ಞನೂ ನಮ್ರನೂ ಆದ ಒಬ್ಬ ಪುರಾಣಿಕನೂ ಪರೀಕ್ಷಿದ್ ರಾಜನಂತೆ ಭಗವಂತನನ್ನು ಶರಣುಹೊಂದಿದವನೂ, ವ್ಯವಹಾರ, ಪ್ರಾಪಂಚಿಕ ಭೋಗವಿಲಾಸಗಳಿಂದ ಹಿಮ್ಮೆಟ್ಟಿದವನೂ ಕಥಾಶ್ರವಣದಲ್ಲಿಯೇ ಏಕಾಗ್ರಮನಸ್ಸುಳ್ಳವನೂ ಆದ ಒಬ್ಬ ಶ್ರೋತೃವೂ ಬೇಕು. ಉಳಿದವರೆಲ್ಲರೂ ಕಥಾಸಮಯಕ್ಕಾದರೂ ಬಿಡುವು ಮಾಡಿಕೊಂಡು ಭಾಗವಹಿಸುವಷ್ಟು ವಿರಕ್ತರಾಗಿರಬೇಕು. ಅನಂತರ ಪ್ರತಿದಿನ ಬೆಳಗ್ಗೆ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮೂಲಮಂತ್ರದಿಂದ ಕೃಷ್ಣಭಗವಂತನಿಗೆ, ಭಾಗವತಗ್ರಂಥಕ್ಕೆ ಪೂಜಾರ್ಚನಾದಿಗಳು ನಡೆಯಬೇಕು. ಭಾಗವತವನ್ನು ಏಳು ದಿನಗಳಲ್ಲಿ ಪಾರಾಯಣಮಾಡಿ ಮುಗಿಸುವ ಸಾಮರ್ಥ್ಯವುಳ್ಳ ಇಬ್ಬರು ಪಂಡಿತರುಗಳೂ ಬೇಕು. ಅವರುಗಳಿಗೆ ಪಾರಾಯಣವನ್ನು ಒಪ್ಪಿಸಿಬಿಡಬೇಕು. ಪ್ರವಚನಮಾಡುವವರು ಬೇರೆ ಇದ್ದು ಪ್ರತಿದಿನವೂ ಮೂರು-ನಾಲ್ಕು ಘಂಟೆಗಳಷ್ಟು ಕಾಲ ಕಥೆಯನ್ನೂ ಅಲ್ಲಲ್ಲಿ ಬರುವ ಸ್ತೋತ್ರಗಳನ್ನೂ ಅಧ್ಯಾತ್ಮತತ್ತ್ವಗಳನ್ನೂ ಜೋಡಿಸಿಕೊಂಡು ಭಕ್ತಿಪ್ರಧಾನವಾಗಿ ಜ್ಞಾನವೈರಾಗ್ಯಗಳ ತಿರುಳನ್ನು ತುಂಬಿ, ಅಲ್ಲಲ್ಲಿ ಮೂಲಶ್ಲೋಕಗಳನ್ನೂ ಪಠನ ಮಾಡುತ್ತಾ ಉಪನಿಷದ್ವಾಕ್ಯಗಳನ್ನೂ ಸ್ಮೃತಿವಾಕ್ಯಗಳನ್ನೂ ಉದಾಹರಿಸುತ್ತಾ ಶ್ರೋತೃಗಳು ತತ್ತ್ವದಲ್ಲಿ ಲೀನರಾಗುವಂತೆ ವ್ಯಾಖ್ಯಾನಮಾಡಬೇಕು. ಭಾಗವತದ ಭಾಷೆಯು ಗಡುಚಾಗಿದ್ದು ಅಲ್ಲಲ್ಲಿ ವೈದಿಕಶಬ್ದಪ್ರಯೋಗಗಳೂ ಗಂಭೀರವಾದ ಪದಾನ್ವಯತಾತ್ಪರ್ಯಗಳೂ ಹೆಣೆದುಕೊಂಡಿರುವದರಿಂದ ಪ್ರವಚನಕಾರರು ಸಾಕಷ್ಟು ಪರಿಶ್ರಮವುಳ್ಳವರೂ ವಿದ್ವಾಂಸರೂ ಆಗಿರಬೇಕು. ಇಂಥವರಿಂದ ಕೇಳಿದ ಕಥೆಯು ಚೆನ್ನಾಗಿ ಪರಿಣಾಮವನ್ನು ಉಂಟುಮಾಡುತ್ತದೆ. ಕಡೆಯಲ್ಲಿ ದ್ವಾದಶಾಕ್ಷರಮೂಲಮಂತ್ರದಿಂದ ಹೋಮ, ಬ್ರಾಹ್ಮಣಭೋಜನಾದಿಗಳನ್ನೂ ನಡೆಸಬೇಕು. ಪಾರಾಯಣ, ಪ್ರವಚನಗಳನ್ನು ನಡೆಯಿಸಿದ ವಿದ್ವಾಂಸರಿಗೆ ವಿತ್ತಶಾಠ್ಯವಿಲ್ಲದೆ ಸಂಭಾವನೆ-ಗೌರವಗಳನ್ನರ್ಪಿಸಿ ಕೃಷ್ಣಾರ್ಪಣಮಾಡಬೇಕು. ಇದೊಂದು ಸಾಮಾನ್ಯಕ್ರಮವಾಗಿರುತ್ತದೆ. ಹೀಗೆ ಮಾಡುವಾಗ ಯಾರಾದರೊಬ್ಬ ಯಜಮಾನರು ಮುಂದಾಳಾಗಿ ಕಾರ್ಯವನ್ನಾರಂಭಿಸಿ ಅನಂತರ ಶ್ರೋತೃಗಳೆಲ್ಲರೂ ಯಥಾಶಕ್ತಿ ಭಾಗವಹಿಸುವದರಿಂದ ಸಾಮೂಹಿಕವೂ ಆಗಲಿದೆ. ಪ್ರಯೋಜನವಂತೂ ಭಗವದ್ಭಕ್ತಿಯ ಲಾಭದಿಂದ ಹಾಗೂ ಸತ್ಸಂಗದಿಂದ ದೊರಕುವ ಆನಂದ, ಹಾಗೂ ಪಾಪಪರಿಹಾರಾದಿಗಳ ಮೂಲಕ ಇಹಪರಗಳಲ್ಲಿ ದೊರಕುವ ಶ್ರೇಯಃಪ್ರಾಪ್ತಿಯೇ ಆಗಿರುವದು. ಒಮ್ಮೆ ಇಂಥ ಸಪ್ತಾಹದಲ್ಲಿ ಭಾಗವಹಿಸಿ ರುಚಿ ನೋಡಿರಿ.

———

# ಆರಿಸಿದ ಅರಳುಮೊಗ್ಗುಗಳು

( ಶ್ರೀ ಸ್ವಾಮಿ ಸೋಮನಾಥಾನಂದರವರ ಬರಹಗಳಿಂದ )

೧. ಒಂದು ದೇಶವು ಚೆನ್ನಾಗಿರಬೇಕಾದರೆ ಅದರಲ್ಲಿ ನಾಲ್ಕು ಬಗೆಯ ಜನರಿರಬೇಕು. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡಬೇಕು. ಹಾಗೆ ಮಾಡಲಿಲ್ಲವಾದರೆ ವರ್ಣಸಂಕರವಾಗುವದು. ವರ್ಣವೆಂದರೆ ಜಾತಿಯಲ್ಲ. ದುರದೃಷ್ಟದಿಂದ ಭರತಖಂಡದಲ್ಲಿ ಅನೇಕರು ವರ್ಣವನ್ನು ಜಾತಿ ಎಂದು ಭಾವಿಸುವದು ಸಾಧಾರಣವಾಗಿಬಿಟ್ಟಿದೆ. ನಿಜವೇನೆಂದರೆ ಗುಣತ್ರಯಗಳ ಸ್ವಭಾವಕ್ಕನುಣವಾಗಿ ತಮ್ಮ ತಮ್ಮ ಕರ್ತವ್ಯಗಳನ್ನು ನಿಷ್ಠೆಯಿಂದ ನೇರವೇರಿಸುವಂಥ ಒಂದೇ ಬಗೆಯ ಜನರನ್ನು ಒಂದೊಂದು ವರ್ಣಗಳೆಂದು ವಿಂಗಡಿಸಿ ಭಗವದ್ಗೀತೆಯಲ್ಲಿ ತಿಳಿಸಿದೆ. ಇದು ಮಾನವನ ಹಾಗೂ ರಾಷ್ಟ್ರದ ಕಲ್ಯಾಣಕ್ಕೆ ತಳಹದಿಯಾಗಿರುತ್ತದೆ.

೨. ಭರತಖಂಡದಲ್ಲಿ ಈಗ ಯಾವ ಜಾತಿಯನ್ನು ತೆಗೆದುಕೊಂಡರೂ ಅದರಲ್ಲಿ ನಾಲ್ಕು ವರ್ಣ(Class)ದ ಜನರಿರುವರು. ಉದಾಹರಣೆಗೆ ಬ್ರಾಹ್ಮಣನ ಕುಟುಂಬವೊಂದರಲ್ಲಿ ಪರಿಶೀಲಿಸಿದರೆ ವೇದಾಧ್ಯಯನ ಜಪತಪಾದಿಗಳಿಗೆ ಜೀವನವನ್ನು ಮೀಸಲಾಗಿರಿಸಿರುವ ಹುಡುಗನೊಬ್ಬನಿರುವನು. ಮತ್ತೊಬ್ಬನು ಮಿಲಿಟರಿ ಇಲಾಖೆಗೆ ಸೇರಿ ಕ್ಯಾಪ್ಟನ್ ಆಗಿರುವನು. ಇನ್ನೊಬ್ಬನು ವ್ಯಾಪಾರಕ್ಕೆ ಕೈಹಾಕಿ ಅಂಗಡಿಯ ಮಾಲೀಕನಾಗಿರುವನು. ಬೇರೊಬ್ಬನು ಯಾವದೋ ಫ್ಯಾಕ್ಟರಿಗೆ ಸೇರಿ ಕೂಲಿಗಾರನಾಗಿರುವನು. ಹೀಗೆ ಒಂದೇ ಜಾತಿಯಲ್ಲಿ ಹುಟ್ಟಿದ ನಾಲ್ವರು ಒಂದೊಂದು ವರ್ಣಧರ್ಮವನ್ನು ಅವಲಂಬಿಸಿರುವರು. ಆದ್ದರಿಂದ ಇಲ್ಲಿ ಜಾತಿಯು ಮುಖ್ಯವಲ್ಲ. ಅವರವರ ಯೋಗ್ಯತೆ ಮತ್ತು ಅಭಿರುಚಿಗೆ ತಕ್ಕಂತೆ ಯಾವ ವೃತ್ತಿಯನ್ನು ಆರಿಸಿಕೊಳ್ಳುವರೋ ಅದು ಮುಖ್ಯ. ಪ್ರತಿಯೊಂದು ವೃತ್ತಿಗೂ ಒಂದೊಂದು ಧರ್ಮವಿದೆ. ಅದನ್ನು ಆಯಾ ವೃತ್ತಿಯವರು ಅನುಸರಿಸಲೇ ಬೇಕು. ಅದಕ್ಕಾಗಿ ಪ್ರಾಣವನ್ನಾದರೂ ಬಿಡಲು ಸಿದ್ಧರಾಗಿರಬೇಕು. ಇದೇ ವರ್ಣಧರ್ಮದ ರಹಸ್ಯವು.

೩. ಭರತಖಂಡದಲ್ಲಿ ನಾವು ಈಗ ಯಾವದನ್ನೂ ಜಾತಿದೃಷ್ಟಿಯಿಂದ ಅಳೆಯಬೇಕಾಗಿಲ್ಲ. ಏಕೆಂದರೆ ಯಾವ ಜಾತಿಯೂ ಪರಿಶುದ್ಧವಾಗಿಲ್ಲ. ಎಲ್ಲ ಜಾತಿಯವರೂ ಬೇರೆಬೇರೆಯ ವೃತ್ತಿಗಳಿಗೆ ಕೈಹಾಕಿರುತ್ತಾರೆ. ಆಯಾ ವೃತ್ತಿನಿಷ್ಠರಿಗೆ ಆಯಾ ಮನೋಭಾವನೆಯೇ ಚೆನ್ನಾಗಿ ಬೆಳೆದು ಬಂದಿರುತ್ತದೆ. ಯಾವ ವೃತ್ತಿಯಲ್ಲಿಯೂ ಮೇಲುಕೀಳುಗಳೆಂಬ ತಾರತಮ್ಯವಿರುವದಿಲ್ಲ. ಆದ್ದರಿಂದಲೇ ಗೀತೆಯಲ್ಲಿ 'ಸ್ವಕರ್ಮಣಾ ತಮಭ್ಯರ್ಚ್ಯ' ಎಂದು ತಿಳಿಸಲಾಗಿದೆ. ಪ್ರತಿಯೊಬ್ಬನೂ ತನ್ನ ತನ್ನ ವೃತ್ತಿಯನ್ನು ಚೆನ್ನಾಗಿ ನಡೆಯಿಸುವ ಮೂಲಕ ಭಗವದಾರಾಧನೆಯನ್ನು ಕೈಗೊಳ್ಳಬೇಕು. ಆಗಲೇ ವಿರಾಡಾತ್ಮನೆನಿಸಿರುವ ರಾಷ್ಟ್ರಪುರುಷನು ಪ್ರಸನ್ನನಾಗುವನು.

# ಮನಸ್ಸಿಗೆ ಉಪದೇಶ

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೭. ಎಲೈ, ಮನಸ್ಸೆ, ನಿನ್ನ ಹೊರಗೆ ಕಾಣುವ ಆಧಿಭೌತಿಕ ಮತ್ತು ಆಧಿದೈವಿಕ ಜಗತ್ತು ಅನಂತವಾಗಿ ಹರಡಿಕೊಂಡಿದೆ. ಅದರ ವಿಸ್ತಾರವು ಎಷ್ಟು ? ಅದು ಎಷ್ಟು ಕಾಲದಿಂದ ಹೀಗೆ ಇದ್ದುಕೊಂಡಿದೆ ? ಅದರಲ್ಲಿರುವ ಚಿತ್ರವಿಚಿತ್ರವಸ್ತುಗಳ, ಪ್ರಾಣಿಗಳ, ಮನುಷ್ಯರೇ ಮುಂತಾದ ಉತ್ತಮಮಧ್ಯಮಾಧಮಜೀವರುಗಳ ಲೆಕ್ಕ ವೇನಾದರೂ ಸಿಕ್ಕುತ್ತದೆಯೆ ? ಹೀಗಿದ್ದರೂ ನೀನೇಕೆ ಈ ಅನಂತವಾದ ವಿಶ್ವದಲ್ಲಿ ಅಲ್ಪಬುದ್ಧಿಯನ್ನು ಮಾಡಿಕೊಂಡು ನರಳುತ್ತಿದ್ದೀಯೆ ? ಅಲ್ಪವೇ ಅಳಿವು, ಅನಂತವೇ ಅಮೃತ– ಎಂಬಿದನ್ನು ಈಗಲಾದರೂ ಮರೆಯದಿರು.

೮. ಎಲೆ ಕ್ಷುದ್ರಮತಿಯೆ, ಅನಂತವಾದ ವಿಶ್ವದಲ್ಲಿ ಎಲ್ಲವನ್ನೂ ಮರೆತು ಭೂಲೋಕವೊಂದನ್ನೇ ಏತಕ್ಕೆ ಚಿಂತಿಸುತ್ತಿರುವೆ? ವಿಶಾಲ ಭೂಮಂಡಲದಲ್ಲಿಯೂ ಖಂಡಗಳನ್ನು ಮಾಡಿಕೊಂಡು ಅದರೊಳಗೆ ರಾಷ್ಟ್ರ, ಭಾಷಾವಾರು ದೇಶ, ಜಿಲ್ಲೆ, ತಾಲ್ಲೂಕು, ಪಟ್ಟಣ, ಹಳ್ಳಿ, ಬೀದಿ, ನೆರೆಮನೆ, ನನ್ನಮನೆ, ಅದರಲ್ಲಿಯೂ ನನ್ನ ಕೋಣೆ, ಅಲ್ಲಿಯೂ ನಾನು ಕುಳಿತುಕೊಳ್ಳುವ ಕುರ್ಚಿ– ಎಂದು ಮತ್ತೆಮತ್ತೆ ಸಂಕೋಚವನ್ನೇ ಮಾಡಿಕೊಂಡಿರುವೆಯಲ್ಲ, ಎಲ್ಲೆಲ್ಲಿಯೂ ಹಬ್ಬಿಕೊಂಡಿರುವದಕ್ಕೆ ನಿನಗೆ ಯಾರು ಅಡ್ಡಿಯನ್ನು ಮಾಡಿರುತ್ತಾರೆ ? ಈ ಅಲ್ಪತನವನ್ನು ಬಿಟ್ಟುಬಿಡು. ನಿನಗೆ ಕ್ಷೇಮವುಂಟಾಗುವದು.

೯. ಎಲೈ ಮನಸ್ಸೆ, ಹೊರಗೆ ಕಾಣುವ ವಸ್ತುಗಳು, ಪ್ರಾಣಿಗಳು, ಮನುಷ್ಯರು– ಮುಂತಾದವರಲ್ಲಿ ಕೆಲವರನ್ನು 'ನನ್ನವರು' ಎಂದು ಮಾಡಿಕೊಳ್ಳುವ ಹವ್ಯಾಸವು ನಿನಗೆ ಅನಿಗಾಲದಿಂದಲೂ ಬಂದಿರುತ್ತದೆ. ಅದಕ್ಕೆ ಕಾರಣವು ನಿನ್ನಲ್ಲಿ ನಿನಗಿರುವ ಅಪರಿಮಿತ ಅಭಿಮಾನವಲ್ಲದೆ ಮತ್ತೇನಿದ್ದೀತು ? 'ನಾನು' ಎಂಬ ಸರ್ವನಾಮದಲ್ಲೇಕೆ ನಿನಗೆ ಇಷ್ಟು ಮೋಹ ? ನಾನು, ನನ್ನನ್ನು, ನನ್ನಿಂದ, ನನಗೆ, ನನ್ನ, ನನ್ನಲ್ಲಿ– ಎಂದು ಆ ಶಬ್ದದ ವಿಭಕ್ತಿರೂಪಗಳನ್ನೇ ಏತಕ್ಕೆ ಜಪಿಸುತ್ತಿರುವೆ ?

೧೦. ಎಲೈ ಬೆಪ್ಪೆ, ಕುರುಡನು ನಿಂತಲ್ಲಿಯೇ ನಿಂತು ಕಾಲು ಅಲುಗಾಡಿಸುತ್ತಿದ್ದರೆ ತೀರ್ಥಕ್ಷೇತ್ರಯಾತ್ರೆಯಾದೀತೆ ? ನೀನು ಇದ್ದಲ್ಲಿಯೇ ಇದ್ದುಕೊಂಡು ಹೊರಕ್ಕೆ ಹೋಗಿರುವೆನು–ಎಂದು ಏತಕ್ಕೆ ಕಲ್ಪಿಸಿಕೊಳ್ಳುತ್ತಿರುವೆ ? ಇಂದ್ರಿಯಗಳ ಸಹಾಯವಿಲ್ಲದೆ ನಿನಗೆ ಹೊರಗೆ ಸಂಚರಿಸುವ ಶಕ್ತಿಯೇ ಇಲ್ಲ. ಹೀಗಿದ್ದರೂ ಒಳಗೇ ಇದ್ದುಕೊಂಡು 'ಎಲ್ಲವನ್ನೂ ಬಲ್ಲೆನು' ಎಂದೇಕೆ ಹೆಮ್ಮೆಪಡುತ್ತಿರುವೆ ? ಹಸುರು ಕನ್ನಡಕದ ಮೂಲಕ ನೋಡಿದಾಗ ಎಲ್ಲವೂ ಹಸುರಾಗಿ ಕಾಣುವಂತೆ ಇಂದ್ರಿಯ ಮೂಲಕ ನೋಡಿದ್ದು ಹಾಗೆಯೇ ವಸ್ತುಗಳು ನಿಜವಾಗಿ ಇರುವವೆನ್ನುವದಕ್ಕೆ ನಿನಗೆ ಪ್ರಮಾಣವೇನಿದೆ ?

———

# ಬಿ. ಬಿ. ಸಿ. ಯಲ್ಲಿ ಅದ್ವೈತ

(ಪತ್ರಿಕಾಪಾಠಕ)

"ಹಿರಿಯ ಪತ್ರಕರ್ತ 'ಸುಧಾ' ವಾರಪತ್ರಿಕೆಯ ಮಾಜಿ ಸಂಪಾದಕ ಇ.ಆರ್. ಸೇತೂರಾಮ್ ಮುಖ್ಯಪಾತ್ರ ನಿರ್ವಹಿಸಿರುವ ಮತ್ತು ವ್ಯಾಖ್ಯಾನನೀಡಿರುವ ಚಿತ್ರ "ಅದ್ವೈತ ಮತ್ತು ಸಂನ್ಯಾಸ"ವನ್ನು ಬ್ರಿಟಿಷ್ ಬ್ರಾಡ್‌ಕ್ಯಾಸ್ಟಿಂಗ್ ಕಾರ್ಪೊರೇಷನ್ ಜನವರಿ 15ನೇ ಭಾನುವಾರ–1984ರಂದು (ಸಂಕ್ರಾಂತಿ ಹಬ್ಬ) ಟೆಲಿವಿಷನ್ ಪ್ರಸಾರಮಾಡಲಾಗುವದು. ಬಿ.ಬಿ.ಸಿ. ಟೆಲಿವಿಷನ್‌ನ ಜನಪ್ರಿಯ 'ಎವೆರಿ ಮ್ಯಾನ್' ಚಿತ್ರಮಾಲಿಕೆಯಲ್ಲಿ 60 ನಿಮಿಷ ಪ್ರಸಾರವಾಗುವ ಈ ಚಿತ್ರ ಅದ್ವೈತಸಿದ್ಧಾಂತ ಮತ್ತು ಸಂನ್ಯಾಸದ ಅರ್ಥವನ್ನು ಪರಿಚಯಿಸುತ್ತದೆ. ಪತ್ರಕರ್ತರೊಬ್ಬರು ನಿವೃತ್ತರಾದ ಮೇಲೆ ಆತ್ಮಜಿಜ್ಞಾಸೆಯಲ್ಲಿ ಆಸಕ್ತಿಹೊಂದಿ ಸಂನ್ಯಾಸ ಬಯಸಿ ಹೊರಟು ಜ್ಞಾನವನ್ನು ಹೊಂದುವದು ಈ ಚಿತ್ರದ ಕಥಾವಸ್ತು. ಬಿ.ಬಿ.ಸಿ. ಟೆಲಿವಿಷನ್ ನಿರ್ದೇಶಕ ಡೇವಿಡ್ ಥಾಂಪ್ಸನ್‌ರವರಿಗೆ ಈ ಚಿತ್ರನಿರ್ಮಾಣದಲ್ಲಿ ಸಹಾಯಕರಾಗಿರುವ ಡಾ॥ ಪಾಲ್ ಕುಫಲೆ ಕೇವಲ 32 ವರ್ಷ ವಯಸ್ಸಿನವರು. ಅವರು ಈಗಾಗಲೆ ವಾರಣಾಸಿಯಲ್ಲಿ ಹನ್ನೆರಡು ವರ್ಷಕಾಲ ಸಂಸ್ಕೃತ ಮತ್ತು ಭಾರತೀಯ ತತ್ತ್ವಶಾಸ್ತ್ರದ ಅಧ್ಯಯನಮಾಡಿ ಕರತಲಾಮಲಕ ಮಾಡಿಕೊಂಡವರಂತೆ. ಈ ವಿದೇಶೀಯರ ಶ್ರದ್ಧೆ ಮತ್ತು ಜಿಜ್ಞಾಸೆ ತಮಗೆ ವಿಸ್ಮಯವುಂಟುಮಾಡಿತೆಂದು ಸೇತೂರಾಮ್ ಹೇಳುತ್ತಾರೆ" —ಕನ್ನಡಪ್ರಭ, 15-1-1984.

ವಾಚಕರೆ, ನಿಮ್ಮಲ್ಲಿ ಕೆಲವರಾದರೂ ಈ ಸುದ್ದಿಯನ್ನು ಓದಿರಬಹುದು. ನಾವು ನಿಸ್ಸಾರವೆಂದು ಭಾವಿಸಿ ಯಾವ ವಿಷಯಗಳನ್ನು ಕೈಬಿಡುವೆವೋ ಅಂಥವುಗಳನ್ನೇ ವಿದೇಶೀಯರು ಆರಿಸಿಕೊಂಡು ಸಾಧಿಸಿ ಅವುಗಳ ರುಚಿಯನ್ನು ಕಂಡುಕೊಂಡು ಜೀವನದಲ್ಲಿ ಆನಂದವನ್ನು ಪಡೆಯಲು ಶ್ರಮಿಸುತ್ತಿದ್ದಾರೆ. ಉಪನಿಷತ್ತುಗಳಲ್ಲಿ ಅಡಗಿರುವ ಅದ್ವೈತಸಿದ್ಧಾಂತವನ್ನೂ ಅದರ ಸಾಕ್ಷಾತ್ಕಾರಕ್ಕೆ ಸಾಧನವಾಗಿರುವ ಸಂನ್ಯಾಸಧರ್ಮವನ್ನೂ ಕೇವಲ ಎಂಟನೆಯ ವಯಸ್ಸಿನಲ್ಲೇ ಸ್ವೀಕರಿಸಿ ಇಡಿಯ ಪ್ರಪಂಚಕ್ಕೇ ವೇದಾಂತಸಿದ್ಧಾಂತದ ಮರ್ಮವನ್ನು ಸಾವಿರಾರು ವರ್ಷಗಳ ಹಿಂದೆಯೇ ಬೋಧಿಸಿದ ಅನ್ವರ್ಥ ಜಗದ್ಗುರುಗಳಾದ ಶ್ರೀ ಶಂಕರಾಚಾರ್ಯರು ಭಾರತೀಯರೇ, ಅದರಲ್ಲಿಯೂ ದಾಕ್ಷಿಣಾತ್ಯರೇ- ಎಂಬಿಷ್ಟಾದರೂ ಅಭಿಮಾನವು ನಮ್ಮಲ್ಲಿ ಮೂಡಬೇಡವೆ ? ಹಾಗೆ ಮೂಡಿದ್ದೇ ಆದರೆ ಆ ಆಚಾರ್ಯವರ್ಯರ ಗ್ರಂಥರಾಶಿಗಳಲ್ಲಿ ಕೆಲವನ್ನಾದರೂ ನಾವು ಓದಿ ಇತರರಿಗೂ ತಿಳಿಸಬೇಕಲ್ಲವೆ ? ಈ ಕಾರ್ಯಗಳನ್ನು ಈಗಾಗಲೇ ಮಾಡುತ್ತಿರುವವರಿಗೆ ನಮ್ಮ ಸಹಾನುಭೂತಿಯನ್ನೂ ಸಹಾಯವನ್ನೂ ನೀಡಬೇಕಲ್ಲವೆ ? ಈ ವಿಷಯದಲ್ಲಿ ಬಿ.ಬಿ.ಸಿ.ಯವರ ಔದಾರ್ಯವನ್ನು ಪ್ರಶಂಸಿಸಿ ಅವರಿಗೆ ನಾವು ಕೃತಜ್ಞತೆಗಳನ್ನರ್ಪಿಸಬೇಕಲ್ಲವೆ ?

# ಗ್ರಂಥಪರಿಚಯ

**ಶ್ರೀಮದ್ಭಗವದ್ಗೀತೆ:** (Holy Gita ಎಂಬ ಗ್ರಂಥದ ಕನ್ನಡ ಅನುವಾದ) ಮೂಲಗ್ರಂಥಕರ್ತರು: ಶ್ರೀ ಸ್ವಾಮಿ ಚಿನ್ಮಯಾನಂದರವರು: ಅನುವಾದಕರು: ಶ್ರೀ|| ಬಿ. ಎ. ಸತ್ಯನಾರಾಯಣ ಮತ್ತು ಬ್ರಹ್ಮಶ್ರೀ. ಪ್ರಕಾಶಕರು: ಸೆಂಟ್ರಲ್ ಚಿನ್ಮಯ ಮಿಷನ್ ಟ್ರಸ್ಟ್; ಕನ್ನಡ ಪ್ರಕಟನ ವಿಭಾಗ; 16, ಸೇಂಟ್ ಜಾನ್ ರಸ್ತೆ, ಬೆಂಗಳೂರು-42. ಪುಟಗಳು: ಡೆಮ್ಮಿ 36 + 560. ಬೆಲೆ ?

ಈ ಗ್ರಂಥವು ಪೂಜ್ಯ ಚಿನ್ಮಯಾನಂದರು ಆಂಗ್ಲಭಾಷೆಯಲ್ಲಿ ರಚಿಸಿರುವ ಗೀತಾ ವ್ಯಾಖ್ಯಾನದ ಕನ್ನಡ ಅನುವಾದವಾಗಿದೆ. ಗ್ರಂಥವು ಭಾರತೀಯರಿಗೆ ಮಾತ್ರವಲ್ಲದೆ ವಿದೇಶೀಯರಿಗೂ– ಅವರಲ್ಲಿಯೂ ಅಧ್ಯಾತ್ಮತತ್ತ್ವಜಿಜ್ಞಾಸುಗಳಿಗೆ– ಒಂದು ಕಾಮಧೇನುವಿನಂತಿದೆ. ಗೀತೆಯು ಅವತಾರವಾದ ಕಾಲದಿಂದಲೂ ಈವರೆಗೂ ಅನೇಕ ಆಚಾರ್ಯರುಗಳೂ ಸಾಧುಸಂತರೂ ಪಂಡಿತರುಗಳೂ ಅದಕ್ಕೆ ವಿವರಣೆಯನ್ನು ಬರೆಯುತ್ತಲೇ ಇದ್ದಾರೆ. ಇಂಥ ಗ್ರಂಥಗಳ ಸಂಖ್ಯೆಯನ್ನು ಕೂಡ ನಾವು ಖಚಿತವಾಗಿ ಹೇಳಲಾರೆವು. ಹೀಗೆ ಜನಪ್ರಿಯವೂ ಪವಿತ್ರವೂ ಸರ್ವಧರ್ಮಗಳ ಸಾರವೂ ಆಗಿರುವ ಗೀತಾರತ್ನವನ್ನು ಪೂಜ್ಯ ಸ್ವಾಮಿಜಿಯವರು ತಮ್ಮ ದೃಷ್ಟಿಕೋನದಿಂದ ಕಡೆದು ಅದರ ಕಾಂತಿಯು ಎಲ್ಲೆಲ್ಲೂ ಪ್ರಸರಿಸುವಂತೆ ಮಾಡಿದ್ದಾರೆ. ಕನ್ನಡಿಗರ ಪುಣ್ಯವಶದಿಂದಲೊ, ಎಂಬಂತೆ ಸೆಂಟ್ರಲ್ ಚಿನ್ಮಯ ಮಿಷನ್ ಟ್ರಸ್ಟಿನವರು ಈ ಕನ್ನಡಾನುವಾದವನ್ನು ಪ್ರಕಟಿಸಿರುವದು ಶ್ಲಾಘ್ಯವಾಗಿದೆ. ಗೀತೆಯಲ್ಲೇ ತಿಳಿಸಿರುವಂತೆ 'ಯಾರುಯಾರು ಹೇಗೆ ಹೇಗೆ ನನ್ನನ್ನು ಸೇವಿಸುವರೋ ಅವರವರನ್ನು ಹಾಗೆಹಾಗೇ ಅನುಗ್ರಹಿಸುವೆನು'– ಎಂಬ ಮಾತು ಈ ಗೀತಾಗ್ರಂಥಕ್ಕೂ ಅವಶ್ಯವಾಗಿ ಅನ್ವಯಿಸುತ್ತದೆ. ಈ ದೃಷ್ಟಿಯಲ್ಲಿ ಶ್ರೀ ಚಿನ್ಮಯಾನಂದರು ತಾವು ಕಂಡುಕೊಂಡ ದರ್ಶನಾನುಸಾರವಾಗಿ ಗೀತೆಯನ್ನು ಇಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ಮುನ್ನುಡಿಯಲ್ಲಿ ಪ್ರಕಾಶಕರು 'ಪೂಜ್ಯ ಸ್ವಾಮಿಜಿಯವರ ವಿಚಾರಲಹರಿ ವಿಶಿಷ್ಟವಾದುದು. ಧರ್ಮಶಾಸ್ತ್ರಗಳು ನಿತ್ಯಸನಾತನವಾದವುಗಳು. ಅಲ್ಲಿ ಹೇಳಿರುವ ಮೂಲವಾಕ್ಯಗಳು ಎಂದಿಗೂ ಸತ್ಯವೇ. ಆದರೆ ಆ ವಾಕ್ಯಗಳನ್ನು ಕಾಲಕ್ಕೆ ತಕ್ಕಂತೆ, ಮೂಲಕ್ಕೆ ಕುಂದುಬರದಂತೆ ನಿರೂಪಣೆ ಮಾಡುವ ಜಾಣ್ಮೆ ಉಪದೇಶಕರಲ್ಲಿರಬೇಕು ಎಂಬುದು ಸ್ವಾಮಿಜಿಯವರ ಮತ'– ಎಂದು ತಿಳಿಸಿದ್ದಾರೆ. ಶ್ರೀ ಶಂಕರರ ಅಭಿಪ್ರಾಯದಂತೆ ಗೀತೆಯು ಧರ್ಮಶಾಸ್ತ್ರವಲ್ಲ; ಮೋಕ್ಷಶಾಸ್ತ್ರವು. ಧರ್ಮವೂ ಮೋಕ್ಷವೂ ಪುರುಷಾರ್ಥಗಳೇ ಆದರೂ ಮೋಕ್ಷವು ಪರಮಪುರುಷಾರ್ಥವೆನಿಸಿರುವದು. ಗೀತೆಯ ಗುರಿ ಮೋಕ್ಷ; ಅದಕ್ಕೆ ಸಾಧನವು ಧರ್ಮ– ಎಂಬುದು ಬಲ್ಲವರ ಮತ. ಶ್ರೀ ಸ್ವಾಮಿಜಿಯವರ ನಿರೂಪಣೆಗಳನ್ನು ಈ ಹಾದಿಯಲ್ಲಿ ಅರ್ಥಮಾಡಿಕೊಂಡಲ್ಲಿ ಓದುಗರು ಕೃತಕೃತ್ಯರಾಗುವರು. ಮುದ್ರಣ, ವಿನ್ಯಾಸ, ಕಲೆ ಎಲ್ಲಾ ರೀತಿಯಿಂದಲೂ ಉನ್ನತಮಟ್ಟದಲ್ಲಿರುವ ಈ ಉದ್ಗ್ರಂಥಕ್ಕೆ ನಮ್ಮ ಸುಸ್ವಾಗತ.

೨. **ವಿಚಾರತರಂಗ:** (ವೈಚಾರಿಕ ಲೇಖನಗಳ ಸಂಗ್ರಹ) ಬರೆದವರು: ಶ್ರೀ|| ಆರ್. ವೆಂಕಟೇಶ್‌ರವರು; ಪ್ರಕಾಶಕರು: ವಿಶ್ವಸಮಾಜ, ತಲಕಾಡು–571122. ಪುಟಗಳು: ಡೆಮ್ಮಿ ೩೦೪; ಬೆಲೆ: ರೂ. ೧೫.

ಇದೊಂದು ಸಾಹಸಮಯವಾದ ಪ್ರಯತ್ನದ ಕೃತಿಯಾಗಿದೆ. ಏಕೆಂದರೆ ಲೇಖಕರು ತಾವು ಆಗಾಗ್ಗೆ ಬೇರೆಬೇರೆಯ ಪತ್ರಿಕೆಗಳಿಗೆ ಬರೆದಿದ್ದ ಲೇಖನಗಳು ಹಾಗೂ ಕೆಲವು ಅಪ್ರಕಟಿತ ಲೇಖನಗಳನ್ನೂ ಕೂಡಿಸಿ ಗ್ರಂಥರೂಪದಿಂದ ತಾವೇ ಹೊರತರುವ ಪ್ರಯತ್ನಮಾಡಿರುವದು,

ಅದಕ್ಕಾಗಿ ಸಾಲಮಾಡಿರುವುದು- ಇವು ನಿಜವಾಗಿಯೂ ಏಕಲವ್ಯನ ಸಾಹಸದಂತಿವೆ. ಈ ಗ್ರಂಥದಲ್ಲಿ ಐದು ತರಂಗಗಳಿವೆ. ಒಂದೊಂದರಲ್ಲಿಯೂ ೧೫ಕ್ಕೆ ಮೇಲ್ಪಟ್ಟು ಲೇಖನಗಳಿವೆ. ಇವುಗಳಲ್ಲಿ ಆಧ್ಯಾತ್ಮಿಕದಿಂದಾರಂಭಿಸಿ ರಾಜಕೀಯದವರೆಗಿನ ಎಲ್ಲಾ ಕ್ಷೇತ್ರಗಳ ಅನೇಕ ಸಮಸ್ಯೆಗಳನ್ನೂ ವಿಶ್ಲೇಷಿಸಿ ಚರ್ಚಿಸಲಾಗಿದೆ. ಪರ ವಿರೋಧಾಭಿಪ್ರಾಯಗಳೆರಡನ್ನೂ ಪ್ರಕಟಿಸಿದೆ. ಇಂಥ ಸಂದರ್ಭದಲ್ಲಿ ಯಾವ ದಾಕ್ಷಿಣ್ಯಕ್ಕೂ ಒಳಗಾಗದೆ ರಾಷ್ಟ್ರಕವಿಗಳನ್ನೂ ಸೇರಿಸಿಕೊಳ್ಳಲಾಗಿದೆ. ಈ ಲೇಖನಗಳನ್ನು ಓದುವದರಿಂದ ಈಗಿನ ವಿದ್ಯಾವಂತರ ಸಮಾಜದಲ್ಲಿ ಏನೇನು ಗೊಂದಲಗಳುಂಟಾಗಿವೆ- ಎಂಬುದು ಚೆನ್ನಾಗಿ ತಿಳಿಯುವಂತಿದೆ. ಯಾರೊಬ್ಬರೂ ಎಲ್ಲರನ್ನೂ ಮೆಚ್ಚಿಸುವದು ಶಕ್ಯವಲ್ಲವಾದರೂ ಸತ್ಯಧರ್ಮಗಳಿಗೆ ತಲೆಬಾಗಿ ಅವುಗಳಿಗೆ ವಿರೋಧವಿಲ್ಲದಂತೆ ಜೀವನವನ್ನು ಅಳವಡಿಸಿಕೊಳ್ಳುವ ಬಗ್ಗೆ ಕೆಲವು ಸೂಚನೆಗಳು ಇಲ್ಲಿ ಸಿಗುತ್ತವೆ. ಕೆಲವು ಬೇರೆ ಬೇರೆಯ ಬರಹಗಾರರ ಬರಹಗಳೂ ಸಮಯಾನುಸಾರ ಇಲ್ಲಿ ಸೇರಿರುತ್ತವೆ ಇಲ್ಲಿರುವ ಯಾವ ಲೇಖನಗಳ ವಿಷಯಕ್ಕೂ ನಾವು ಏನನ್ನೂ ಹೇಳಲಿಚ್ಛಿಸದೆ ತೀರ್ಮಾನವನ್ನು ಓದುಗರಿಗೇ ಬಿಟ್ಟಿದ್ದೇವೆ. ಏಕೆಂದರೆ ನಮ್ಮ ಕ್ಷೇತ್ರವು ಆಧ್ಯಾತ್ಮವಿಷಯಗಳ ವಿಮರ್ಶೆಗೆ ಮಾತ್ರ ಸೀಮಿತವಾಗಿರುವದೇ ಕಾರಣ. ಈ ಗ್ರಂಥದ ಪುಟ ೧೫೯, ಹಾಗೂ ೧೬೨ರಲ್ಲಿ ಅಧ್ಯಾತ್ಮಪ್ರಕಾಶ ಪತ್ರಿಕೆಯಲ್ಲಿ ಹಿಂದೆ ಪ್ರಕಟವಾಗಿದ್ದ ಕೆಲವು ಲೇಖನಗಳ ಅಭಿಪ್ರಾಯವನ್ನೂ ಪರಾಮರ್ಶಿಸಲಾಗಿದೆ. ಲೇಖಕರಿಗೆ ನಮ್ಮ ಧನ್ಯವಾದಗಳನ್ನು ಈ ಮೂಲಕ ಅರ್ಪಿಸುತ್ತೇವೆ.

೩. **ಅಮರವಾಣೀ : ಜೀವನಧಾರೆ :** ಲೇಖಕರು : ಶ್ರೀರಂಗಮಹಾಗುರು ; ಪ್ರಕಾಶಕರು : ಅಷ್ಟಾಂಗಯೋಗವಿಜ್ಞಾನಮಂದಿರ, 957, ಶೇಷಾದ್ರಿ ಅಯ್ಯರ್ ರಸ್ತೆ, ಲಕ್ಷ್ಮೀಪುರಂ- ಮೈಸೂರು-೪ ; ಪುಟಗಳು : ಡೆಮ್ಮಿ ೨೦೬ ; ಬೆಲೆ : ರೂ. ೧೫ ; ಉತ್ತಮಪ್ರತಿ ರೂ. ೨೫.

ನಂಜನಗೂಡು ತಾಲ್ಲೂಕು ಹೆಡತಲೆಗ್ರಾಮದಲ್ಲಿ ನೆಲಸಿದ್ದ ಶ್ರೀರಂಗಮಹಾಗುರುಗಳ ಪ್ರವಚನಗಳ ಸಂಕಲನವೇ ಈ ಗ್ರಂಥವಾಗಿದೆ. ಅಷ್ಟಾಂಗಯೋಗವಿಜ್ಞಾನಮಂದಿರದ ಉಪಕಾರ್ಯದರ್ಶಿಗಳಾದ ಶ್ರೀ ಛಾಯಾಪತಿಯವರೂ ಶ್ರೀವರದದೇಶಿಕಾಚಾರ್ಯರಂಗಪ್ರಿಯರೂ ಈ ಪ್ರವಚನಗಳನ್ನು ಸಂಗ್ರಹಿಸಿ ಬರಹರೂಪದಲ್ಲಿ ಒದಗಿಸಿಕೊಟ್ಟಿದ್ದಾರೆ. ಪ್ರಾರಂಭದಲ್ಲಿ ಶ್ರೀಗುರುವಿನ ಜೀವನಚರಿತ್ರೆಯೂ ಸಂಗ್ರಹವಾಗಿ ಕೊಡಲ್ಪಟ್ಟಿದೆ. ವಿಶಿಷ್ಟಾದ್ವೈತಸಂಪ್ರದಾಯಕ್ಕೆ ಸೇರಿದ್ದ ಈ ಮಹಾಗುರುಗಳು ಯೋಗಶಾಸ್ತ್ರದ ವಿಶೇಷಪರಿಚಯವುಳ್ಳವರೂ ಆಗಿದ್ದು ಸಮನ್ವಯದೃಷ್ಟಿಯಿಂದ, ಲೌಕಿಕದೃಷ್ಟಾಂತಗಳೊಡನೆ ಹೃದಯಂಗಮವಾಗಿ ಬೋಧಿಸಿರುವ ಪರಮೋಪದೇಶಗಳು ಈ ಗ್ರಂಥದಲ್ಲಿ ಅಡಕವಾಗಿವೆ. ''ಅಮರವಾಣೀ ಗ್ರಂಥಮಾಲೆಯ ಈ ಪ್ರಥಮಪುಷ್ಪವು ಪರಿಪೂರ್ಣವಾದ ಜೀವನದರ್ಶನವನ್ನು ಕುರಿತ ಅನ್ಯಾದೃಶವೂ ಅಮೂಲ್ಯವೂ ಆದ ಕೃತಿರತ್ನ. ಜೀವನದ ಸ್ವರೂಪವೇನು ? ಉಪಲಕ್ಷ್ಯಗಳಾವುವು ? ಇತ್ಯಾದಿ ವಿಷಯಗಳನ್ನು ಅತ್ಯಂತ ಆಳವಾಗಿಯೂ ಅಷ್ಟೇ ವ್ಯಾಪಕವಾಗಿಯೂ ಅವಲೋಕನಮಾಡಿರುವ ಜ್ಞಾನವಿಜ್ಞಾನಮಯವಾದ ಕೋಶ. ಜ್ಞಾನವಿಜ್ಞಾನತೃಪ್ತನಾದ ಮಹಾಪುರುಷನೊಬ್ಬನು ಜೀವಿಗಳ ಹಿತಕ್ಕಾಗಿ ನೀಡಿರುವ ಸಂದೇಶ ಮತ್ತು ವಿಮರ್ಶರೂಪವಾದ ವಾಙ್ಮಯ''- ಎಂದು ಪ್ರಾರಂಭದಲ್ಲಿ ತಿಳಿಸಿರುವದನ್ನು ವಾಚಕರು ಗ್ರಂಥಾವಲೋಕನದಿಂದ ಸವಿಯಬಹುದು. ಅಧ್ಯಾತ್ಮಸಾಧಕರೂ ವೇದಾಂತಪ್ರಿಯರೂ ಆದ ವಾಚಕರು ಅವಶ್ಯವಾಗಿ ಒಮ್ಮೆ ಓದಬೇಕಾದ ಪವಿತ್ರಗ್ರಂಥವಿದು.

---

# ಜಿಜ್ಞಾಸುಗಳೊಬ್ಬರ ಕಣ್ಮರೆ

(ಶ್ರೀ ದೇವರಾಯ ಕುಲಕರ್ಣಿಯವರು)

ಶ್ರೀಪರಮಹಂಸ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ವೇದಾಂತ ಚಿಂತನಕ್ರಮದಲ್ಲಿ ಸಾರಗ್ರಾಹಿಗಳಾದ ಅನೇಕ ವಿದೇಶೀಯ ಜಿಜ್ಞಾಸುಗಳಲ್ಲಿ ಇತ್ತೀಚೆಗೆ ನಿಧನರಾದ ಶ್ರೀ ರೇನೇ ಅಲ್ಲಾರ್ (Rene Allar) ಎಂಬವರೂ ಒಬ್ಬರು. ನನಗೆ ತಿಳಿದಂತೆ ಇವರನ್ನು ಪರಿಚಯಮಾಡಿಕೊಡುವೆನು.

ಫ್ರಾನ್ಸ್‌ದೇಶದ ರಾಜಧಾನಿಯಾದ ಪ್ಯಾರಿಸ್‌ನಗರದಲ್ಲಿ ವಾಸಿಸುತ್ತಿದ್ದ ಇವರನ್ನು ನಾನು 1982ನೆಯ ಆಗಸ್ಟ್ ಮಾಹೆಯಲ್ಲಿ ಅಲ್ಲಿಗೆ ಹೋಗಿದ್ದಾಗ ಶ್ರೀಮತಿ ಗಿಬರ್ಟಿ ರೋಸೆರೆ ಎಂಬ ಮಹಿಳೆಯೊಬ್ಬರ ಮನೆಯಲ್ಲಿ ಭೇಟಿಮಾಡಿದ್ದೆನು. ಅನಂತರ ತಾ॥ 15-10-82ರಂದು ಶ್ರೀಯುತರು ನನ್ನನ್ನು ತಮ್ಮ ಮನೆಗೇ ಕರೆದೊಯ್ದು ಲಂಡನ್ನಿನ ಶ್ರೀ A. J. Alston ಎಂಬವರು ಬರೆದಿದ್ದ "A Samkara Source Book" ಎಂಬ ಗ್ರಂಥವನ್ನು ನನಗೆ ಕೊಟ್ಟಿದ್ದರು.

ಶಾಂಕರವೇದಾಂತದಲ್ಲಿ ಸಂಪೂರ್ಣವಾಗಿ ಆಸಕ್ತಿಯನ್ನು ಹೊಂದಿದ್ದ ಇವರು ಪೂಜ್ಯ ಶ್ರೀಶ್ರೀಗಳವರ ಗ್ರಂಥಗಳನ್ನೆಲ್ಲ ಬಹಳವಾಗಿ ಮೆಚ್ಚಿಕೊಂಡಿದ್ದರು. ಮತ್ತು ಅವುಗಳನ್ನು ಚೆನ್ನಾಗಿ ಅಧ್ಯಯನಮಾಡಿ ತಮ್ಮಲ್ಲಿಗೆ ಬಂದ ಇತರ ಜಿಜ್ಞಾಸುಗಳಿಗೂ ಹೇಳಿ ವಿಚಾರವಿನಿಮಯವನ್ನು ಮಾಡಿಕೊಳ್ಳುತ್ತಿದ್ದರು. 1971ರಲ್ಲಿ ಅಕಸ್ಮಾತ್ತಾಗಿ ಇವರಲ್ಲಿಗೆ ಬಂದ ಇಟಲಿದೇಶದ ಜಿಜ್ಞಾಸುಗಳಾದ Sri Allessandro Bruchettini ಎಂಬ ಮಹಾಶಯರಿಗೂ ಇವರು ಶ್ರೀಶ್ರೀಗಳವರ ಗ್ರಂಥಗಳ ಹಾಗೂ ವಿಚಾರಸರಣಿಯ ಪರಿಚಯವನ್ನು ಮಾಡಿಸಿದ್ದರಿಂದ ಬ್ರುಸ್ಕೇಟಿನಿಯವರು ಈಚೆಗೆ ಭಾರತದೇಶಕ್ಕೆ ಬಂದಾಗಲೆಲ್ಲ ಎರಡುಮೂರು ಬಾರಿ ಹೊಳೆನರಸೀಪುರದ ಅಧ್ಯಾತ್ಮಪ್ರಕಾಶಕಾರ್ಯಾಲಯಕ್ಕೆ ಭೇಟಿಯನ್ನು ನೀಡುವದಕ್ಕೂ ಗ್ರಂಥಪ್ರಕಟನೆಗೆ ಯಥೋಚಿತ ದ್ರವ್ಯಸಹಾಯವನ್ನು ನೀಡಿ ಪ್ರೋತ್ಸಾಹಿಸುವದಕ್ಕೂ ಅವಕಾಶವಾಯಿತು. ಬ್ರುಸ್ಕೇಟಿನಿಯವರು 1971ರಿಂದಲೇ ಶ್ರೀಶ್ರೀಗಳವರ ಭಕ್ತರಾಗಿದ್ದುಕೊಂಡು ಸಾಕ್ಷಾತ್ತಾಗಿ ಶ್ರೀಗಳೊಡನೆ ಅನೇಕಬಾರಿ ಸಂಭಾಷಿಸಿ ಪ್ರಭಾವಿತರಾಗಿ ಈಗಲೂ ಗುರುಗಳ ಪರಮಭಕ್ತರಾಗಿ ಬಾಳುತ್ತಿದ್ದಾರೆ. ಸ್ವಾಧ್ಯಾಯ, ಪ್ರವಚನಗಳನ್ನು ಕೈಬಿಡಬಾರದು- ಎಂಬ ವೇದೋಕ್ತಿಗೆ ತಕ್ಕಂತೆ ಸೇವೆ ಸಲ್ಲಿಸಿದ ಶ್ರೀ ರೇನೇಅಲ್ಲಾರ್ ರವರು ETRE (ಸತ್ಯ) ಎಂಬ ಫ್ರೆಂಚ್ ಭಾಷೆಯ ಮಾಸಪತ್ರಿಕೆಯನ್ನೂ ಪ್ರಕಟಿಸುತ್ತಿದ್ದರು. ಶ್ರೀಶ್ರೀಗಳವರ ಹಾಗೂ ನಾನು ಬರೆದ ಅನೇಕ ಲೇಖನಗಳನ್ನು ಫ್ರೆಂಚ್‌ಭಾಷೆಗೆ ಪರಿವರ್ತಿಸಿ ಶ್ರೀಯುತರು ಅದರಲ್ಲಿ ಪ್ರಕಟಿಸಿದ್ದಾರೆ. ಇಂಥ ಮಹನೀಯರ ಆತ್ಮಕ್ಕೆ ಗುರುದೇವರು ಚಿರಶಾಂತಿಯನ್ನು ನೀಡಲೆಂದು ಪ್ರಾರ್ಥಿಸುವೆನು.

———

# ಉದುತ್ಯಂ ಜಾತವೇದಸಮ್

(ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

'ಅಧ್ಯಾತ್ಮಪ್ರಕಾಶ' ಪತ್ರಿಕೆಯಲ್ಲಿ ಈಚೆಗೆ ಸ್ಥಿರಶೀರ್ಷಿಕೆಗಳಾಗಿ ಬರುತ್ತಿರುವ ಲೇಖನವಿಭಾಗಗಳಲ್ಲಿ ಪ್ರಮುಖವಾದ ವೇದಮಂತ್ರಗಳ ಅಭಿಪ್ರಾಯವನ್ನು ವಿವರಿಸುವ ಅನೇಕ ಬರಹಗಳನ್ನು ಈಗಾಗಲೆ ವಾಚಕರಿಗೆ ಅರ್ಪಿಸಲಾಗಿದೆ. ಈವರೆಗೆ ವಿವರಣೆಮಾಡುತ್ತಿದ್ದ ವಿಷ್ಣುಸೂಕ್ತದ ವೇದಭಾಗವು ಪೂರೈಸಿದ್ದರಿಂದ ಇನ್ನು ಮುಂದೆ ಸೌರಸೂಕ್ತವನ್ನು ವ್ಯಾಖ್ಯಾನಮಾಡಬೇಕೆಂದು ಸಂಕಲ್ಪಿಸಿ ಈ ಹೊಸ ಲೇಖನಮಾಲೆಯನ್ನು ಈಗ ಪ್ರಾರಂಭಿಸಲಾಗುತ್ತಿದೆ.

ಋಗ್ವೇದಸಂಹಿತೆಯಲ್ಲಿ ಅಡಕವಾಗಿರುವ ಈ ಸೌರಮಂತ್ರಗಳನ್ನು ಸಂಗ್ರಹಿಸಿ 'ಸಸ್ವರ ವೇದಮಂತ್ರಾಃ' (1977) ಎಂಬ ರಾಮಕೃಷ್ಣಾಶ್ರಮದವರ ಪ್ರಕಟನೆಯಲ್ಲಿ 349ನೆಯ ಪುಟದಿಂದ ಕೊಡಲಾಗಿದೆ. ಇವು ಒಟ್ಟು ೬೪ ಮಂತ್ರಗಳಿವೆ. ಇವುಗಳಲ್ಲಿ ಮೊದಲನೆಯ ಹದಿಮೂರು ಮಂತ್ರಗಳು ಋಗ್ವೇದದ ಒಂದನೆಯ ಅಷ್ಟಕದ ನಾಲ್ಕನೆಯ ಅಧ್ಯಾಯದ ಏಳನೆಯ ವರ್ಗದಲ್ಲಿವೆ. ಪ್ರಸ್ಕಣ್ವನೆಂಬ ಮಹರ್ಷಿಯು ಕಂಡುಕೊಂಡ ಮಂತ್ರಗಳಿವು. ಸೂರ್ಯದೇವತಾತ್ಮಕವಾದವುಗಳು. ಮೊದಲನೆಯ ಒಂಭತ್ತುಮಂತ್ರಗಳು ಗಾಯತ್ರೀ ಛಂದಸ್ಸಿನಲ್ಲಿಯೂ ಉಳಿದ ನಾಲ್ಕು ಅನುಷ್ಟುಪ್ ಛಂದಸ್ಸಿನಲ್ಲಿಯೂ ಇವೆ. ಈ ಮಂತ್ರಗಳ ಅಭಿಮಾನಿದೇವತೆಯಾದ ಸೂರ್ಯನು ಎಲ್ಲ ಪ್ರಾಣಿಗಳಿಗೂ ಚಿರಪರಿಚಿತನು. ಸೂರ್ಯೋದಯವಾಗದೆ ಪ್ರಪಂಚದ ವ್ಯವಹಾರವೇ ಸಾಗುವಂತಿಲ್ಲ. ಇಂಥ ಸೂರ್ಯನೇ ಸ್ಥಾವರ ಜಂಗಮಪ್ರಾಣಿಗಳ ಆತ್ಮನೂ ಆಗಿರುವನು. ಸಂಧ್ಯಾವಂದನಕಾಲಕ್ಕೆ ದ್ವಿಜರೆಲ್ಲರೂ ಸೂರ್ಯನನ್ನೇ ಉಪಾಸನೆಮಾಡುತ್ತಾರೆ. ಪ್ರತ್ಯಕ್ಷದೇವತೆಗಳಲ್ಲೊಬ್ಬನಾದ ಸೂರ್ಯನ ಮಹಿಮೆಯನ್ನು ಕುರಿತು ಪ್ರಸ್ಕಣ್ವಋಷಿಯು ಹಾಡಿರುವ ಈ ಮಂತ್ರಾರ್ಥಗಳನ್ನು ಇನುಮುಂದೆ ನಾವು ಅನುಸಂಧಾನಮಾಡೋಣ.

**ಓಂ ॥ ಉದುತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ ।**
**ದೃಶೇ ವಿಶ್ವಾಯ ಸೂರ್ಯಮ್ ॥ ೧ ॥**

"ಪ್ರಸಿದ್ಧನಾಗಿರುವ, ಹಾಗೂ ಹುಟ್ಟಿರುವ ಎಲ್ಲಾ ಪ್ರಾಣಿಗಳನ್ನೂ ಬಲ್ಲವನಾದ ದೇವನಾದ ಸೂರ್ಯನನ್ನು ಸಮಸ್ತ ಜಗತ್ತಿನ ದರ್ಶನಕ್ಕಾಗಿ ಅವನ ರಶ್ಮಿಗಳು ಮೇಲುಮೇಲಕ್ಕೆ ಒಯ್ಯುತ್ತಿರುವವು"– ಎಂದು ಮಂತ್ರಾರ್ಥವು.

ಸೂರ್ಯನು ನಮಗೆ ಕೋಟಿಗಟ್ಟಲೆ ಮೈಲುಗಳ ದೂರದಲ್ಲಿರುತ್ತಾನೆ. ಎಂಥ ವಿಜ್ಞಾನಿಗಳಿಂದಲೂ ಅವನನ್ನು ಮುಟ್ಟುವದು ಸಾಧ್ಯವಾಗಿಲ್ಲ. ಹಾಗೆಯೇ ಯಾವ ರಾಜಕೀಯನಾಯಕರುಗಳೂ ಆತನನ್ನು ತಮ್ಮವನನ್ನಾಗಿ ಮೀಸಲಿರಿಸಿಕೊಂಡು ಬೇರೆಯವರಿಗೆ ದೊರಕದಂತೆ ಮಾಡಲು ಸಮರ್ಥರಾಗಿಲ್ಲ. ಹೀಗೆ ಅತ್ಯಂತ ಸಮನೂ

ಏಕನೂ ಅದ್ವಿತೀಯನೂ ತೇಜೋಮಯನೂ ಆದ ಈ ದೇವತೆಯು ಭಗವಂತನ ಸಾಕ್ಷಾದ್ ವಿಭೂತಿರೂಪನೇ ಎಂಬ ಮಾತಿಗೆ ಎರಡಿಲ್ಲ. ಪ್ರತಿದಿನವೂ ಈತನು ತನ್ನ ಪವಿತ್ರಕಿರಣಗಳಿಂದ ನಮ್ಮನ್ನು ಸ್ಪರ್ಶಿಸುತ್ತಿರುವನು. ಮಳೆಗಾಲದಲ್ಲೀ ನಾದರೂ ಆಕಾಶದಲ್ಲಿ ಮೋಡಗಳೇ ತುಂಬಿಕೊಂಡಿದ್ದು ದಿನಪೂರ್ತಿಯೂ ಒಮ್ಮೆಯೂ ಸೂರ್ಯದರ್ಶನವಾಗದೆ ಹೋದರೆ ಆ ದಿನವನ್ನು 'ದುರ್ದಿನ'ವೆನ್ನುವರು. ಎಷ್ಟೋ ಜನ ಸಂಪ್ರದಾಯನಿಷ್ಠರು ಅಂಥ ದಿನಗಳಲ್ಲಿ ಊಟವನ್ನೇ ಮಾಡದೆ ಉಪವಾಸ ವನ್ನಾಚರಿಸುವರು. ಬಿಸಿಲಿನ ಪ್ರಯೋಜನವು ಇಷ್ಟೆಂದು ಹೇಳಲು ಬರುವದೇ ಇಲ್ಲ. ಸಸ್ಯಗಳು ಪಕ್ವವಾಗುವದಕ್ಕೆ, ಪ್ರಾಣಿಗಳು ಜೀವಿಸುವದಕ್ಕೆ, ಮನುಷ್ಯರು ತಮ್ಮ ವ್ಯವಹಾರಗಳನ್ನು ಮುಂದುವರಿಸುವದಕ್ಕೆ ಬೆಳಕೂ ಶಾಖವೂ ಅತ್ಯವಶ್ಯ ವೆಂದು ಹೇಳಬೇಕಾಗಿಲ್ಲ. ಇಂಥ ಸೂರ್ಯನು ಉದಯಿಸುತ್ತಿರುವಾಗಲೇ ಅವನ ದಿವ್ಯಕಿರಣಗಳು ಆತನನ್ನು ಮೇಲುಮೇಲಕ್ಕೆ ಒಯ್ಯುತ್ತಿರುವಂತೆ ಕಂಡುಬರುವದು. ಸೂರ್ಯನು ಮೇಲೇರಿದಂತೆಲ್ಲ ಜಗತ್ತನ್ನೆಲ್ಲ ಬೆಳಗುತ್ತಾ ಎಲ್ಲವನ್ನೂ ನೋಡುವ ಸಾಕ್ಷಿಯಾಗಿ ಬಿಡುವನು. ಎಲ್ಲಕ್ಕಿಂತಲೂ ಎತ್ತರದಲ್ಲಿರುವನು. ಇದು ಅವನು ಎಲ್ಲಾ ರೀತಿಯ ಪಾಪಗಳಿಂದಲೂ ಮೇಲಿದ್ದಿರುವನು— ಎಂಬುದಕ್ಕೆ ಗುರುತಾಗಿದೆ. ಚಂದ್ರನಂತೆ ಸೂರ್ಯನಲ್ಲಿ ಕಳಂಕವಿಲ್ಲ. ಸೃಷ್ಟಿಯ ಆರಂಭದಲ್ಲಿ ಪ್ರಜಾಪತಿಯು ಹಿಂದಿನ ಕಲ್ಪದಲ್ಲಿ ಯಾರು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಪರಿಶುದ್ಧರಾಗಿದ್ದರೋ ಅಂಥವರಲ್ಲೀ ಅತ್ಯಂತ ಹೆಚ್ಚಿನ ಪುಣ್ಯವಂತನನ್ನಾರಿಸಿ ಸೂರ್ಯನನ್ನಾಗಿ ಮಾಡಿದನು— ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ಹೀಗೆ ಸೂರ್ಯಭಗವಂತನು ಜಗತ್ತನ್ನೆಲ್ಲ ತನ್ನ ಕಿರಣಗಳಿಗೆ ವಶಪಡಿಸಿಕೊಂಡು ಆ ಮೂಲಕ ಎಲ್ಲಾ ಪ್ರಾಣಿಗಳನ್ನೂ ಬಲ್ಲವನಾಗಿಯೂ ಇರುವನು. ಕೆಲವು ಪ್ರಾಣಿ ಗಳು ನೀರಿನಲ್ಲೋ ಭೂಮಿಯಲ್ಲೋ ಅಡಗಿದ್ದುಕೊಂಡು ಸೂರ್ಯನಿಗೆ ಗೋಚರ ವಾಗದೆ ಇರಬಹುದು. ಆದರೂ ಅವುಗಳನ್ನೂ ತನ್ನ ಉಷ್ಣಾಂಶದಿಂದ ವ್ಯಾಪಿಸಿ ಕೊಂಡೇ ಇರುವ ಸೂರ್ಯನು ಸರ್ವಾತ್ಮನೇ ಆಗಿರುವನು. ಇಂಥ ಸೂರ್ಯನು ಉದಯಿಸುತ್ತಿರುವಲ್ಲಿ ಅವನ ಕಿರಣಗಳನ್ನು ನಾವು ಸ್ಪರ್ಶಿಸಿ ಶುದ್ಧರಾಗಿ ಆತನ ಆರಾಧನೆಯನ್ನು ಕೈಗೊಳ್ಳಬೇಕು. ಸ್ತೋತ್ರ–ನಮಸ್ಕಾರಗಳೇ ಆತನ ಆರಾಧನೆಯ ಬಗೆಗಳು—ಎಂದು ತಿಳಿಯಬೇಕು. ಈಗ ಎರಡನೆಯ ಮಂತ್ರವನ್ನು ನೋಡೋಣ.

**ಓಂ॥ ಅಪತ್ಯೇ ತಾಯವೋ ಯಥಾ ನಕ್ಷತ್ರಾ ಯಂತ್ಯಕ್ತುಭಿಃ ।**
**ಸೂರಾಯ ವಿಶ್ವಚಕ್ಷಸೇ ॥ ೨ ॥**

"ವಿಶ್ವಚಕ್ಷುವಾದ ಸೂರ್ಯನು ಬರಲಿದ್ದಾನೆಂದು ತಿಳಿದಕೂಡಲೆ ಕಳ್ಳರಂತೆ ನಕ್ಷತ್ರಗಳು ರಾತ್ರಿಯೊಡನೆ ಕಣ್ಮರೆಯಾಗಿಬಿಡುವವು" ಎಂದು ಮಂತ್ರಾರ್ಥ.

ಭೂಲೋಕದ ಜನರ ದೃಷ್ಟಿಯಿಂದ ಸೂರ್ಯನಲ್ಲಿ ಹಗಲು ರಾತ್ರಿಗಳು ಕಲ್ಪಿತವಾಗಿರುವವು. ಒಂದು ವೇಳೆ ನಾವು ಸೂರ್ಯಲೋಕದಲ್ಲೇ ಇದ್ದಿದ್ದರೆ

ರಾತ್ರಿಯ ಕತ್ತಲೆಯ ಭಯವೇ ಇರುತ್ತಿರಲಿಲ್ಲ. ಇರಲಿ. ಸೂರ್ಯನು ಪ್ರಕಾಶಿಸುತ್ತಿರುವಲ್ಲಿ ಯಾವ ಉಳಿದ ಬೆಳಕೂ ಕೆಲಸಮಾಡುವದಿಲ್ಲ. ಎಲ್ಲವೂ ಮಂಕಾಗಿ ಬಿಡುವವು. ಹೀಗಿರುವಲ್ಲಿ ಕತ್ತಲೆಯಂತೂ ಸೂರ್ಯನಿರುವಲ್ಲಿ ಹೇಗೆ ತಾನೆ ಇದ್ದೀತು ? ಈ ಮಹಿಮೆಯನ್ನೇ ಪ್ರಸ್ಕಣ್ವಋಷಿಯು ಈ ಮಂತ್ರದಲ್ಲಿ ತಿಳಿಸಿದ್ದಾನೆ. ತಾಯು-ಎಂದರೆ ಕಳ್ಳನೆಂದರ್ಥ. ಮಾಲೀಕನು ಬಂದಾಗ ಕಳ್ಳನು ಓಡಿಹೋಗುವಂತೆ ಸೂರ್ಯನು ತೋರಿಕೊಂಡನೆಂದರೆ ಸರಿ, ಕತ್ತಲೆಯು ಹೇಳಹೆಸರಿಲ್ಲವಾಗುವದು. ಇನ್ನು ನಕ್ಷತ್ರಗಳೇ ಮುಂತಾದ ಬೆಳಕುಗಳನ್ನು ವಿಚಾರಮಾಡೋಣ. ನಕ್ಷತ್ರ ಶಬ್ದಕ್ಕೆ ಭಾಷ್ಯದಲ್ಲಿ ಕೊಟ್ಟಿರುವ ಅರ್ಥಗಳು ಹೀಗಿವೆ. (೧) ದೇವಗೃಹಗಳು ನಕ್ಷತ್ರಗಳೆನಿಸಿರುವವು. (೨) ಮನುಷ್ಯರು ತಮ್ಮ ಪುಣ್ಯವಿಶೇಷದಿಂದ ಸ್ವರ್ಗವನ್ನು ಪಡೆದುಕೊಂಡಾಗ ನಕ್ಷತ್ರರೂಪದಿಂದ ವಿರಾಜಿಸುವರು (೩) ನಾಶವಾಗದೆ ಕುಂದದೆ ಇರುವವೇ ನಕ್ಷತ್ರಗಳು- ಹೀಗೆ ಯಾವರೀತಿಯಿಂದ ವ್ಯುತ್ಪತ್ತಿಮಾಡಿದರೂ ನಮಗೆ ಆಕಾಶದಲ್ಲಿ ಗೋಚರವಾಗುತ್ತಿರುವ ಜ್ಯೋತಿರ್ಮಂಡಲಗಳು ಸೂರ್ಯನು ಉದಯಿಸಿದನೆಂದರೆ ಕಾಂತಿಹೀನವಾಗಿ ಕಣ್ಮರೆಯಾಗಿಬಿಡುವವು. ಖಗೋಳ ಶಾಸ್ತ್ರಜ್ಞರ ಅಭಿಪ್ರಾಯದಂತೆ ಸೂರ್ಯನನ್ನು ನೂರುಪಾಲು ಮೀರಿಸುವ ನಕ್ಷತ್ರಗಳೂ ಗ್ರಹಗಳೂ ಇರಬಹುದು. ಆದರೆ ಭೂಲೋಕದ ಜನರ ಅಪೇಕ್ಷೆಯಿಂದ ಸೂರ್ಯನೇ ಹೆಚ್ಚಿನ ತೇಜೋದ್ರವ್ಯವಾಗಿರುವನು. ಆ ದೃಷ್ಟಿಯಿಂದಲೇ ಇಲ್ಲಿ ಸ್ತುತಿಮಾಡಲಾಗಿದೆ. ಜ್ಯೋತಿಷ್ಕರ ಅಭಿಪ್ರಾಯದಂತೆಯೂ ಸೂರ್ಯನೇ ಹೆಚ್ಚು ಪ್ರಕಾಶಯುಕ್ತನಾದವನು. ಈತನಿಗೆ ವಕ್ರಗತಿಯಿರುವದಿಲ್ಲ. ಗುರು, ಶನಿ-ಮುಂತಾದವರು ಹಿಂದಕ್ಕೂ ಸರಿಯುವದುಂಟು. ಆದರೆ ಸೂರ್ಯಚಂದ್ರರು ಹಾಗೆ ಹಿಂದಕ್ಕೆ ಹೋಗುವ ಸಂಭವವಿಲ್ಲ. ಸೋಮವಾರವಾದ ಅನಂತರ ಮಂಗಳವಾರವೇ ಆದೀತೇ ಹೊರತು ಭಾನುವಾರವಾಗುವದಿಲ್ಲ. ಮತ್ತು ಉಳಿದ ಗ್ರಹಗಳು ಯಾರೇ ಇರಲಿ, ಸೂರ್ಯನೊಡನೆ ಒಂದೇ ರಾಶಿ, ನಕ್ಷತ್ರಗಳಲ್ಲಿ ಸೇರಿಬಿಟ್ಟರೆ ಅಸ್ತರಾಗಿಬಿಡುವರು. ಎಷ್ಟೋ ಜನರಿಗೆ ಶುಭಯೋಗಕಾರಕಗ್ರಹಗಳು ಉತ್ತಮಸ್ಥಾನದಲ್ಲಿದ್ದರೂ ಸೂರ್ಯನೊಡನೆ ಸೇರಿಬಿಟ್ಟಿದ್ದರೆ ಅಭಿಭೂತರಾಗಿಬಿಡುವದರಿಂದ ಫಲಗಳು ಸರಿಯಾಗಿ ನಡೆಯುವದಿಲ್ಲ. ಹೀಗೆಲ್ಲ ಜ್ಯೋತಿಷ್ಕರ ಅಭಿಪ್ರಾಯವಿದೆ. ಆದ್ದರಿಂದ ಸೂರ್ಯನನ್ನು ಕಂಡು ಕಳ್ಳರಂತೆ ನಕ್ಷತ್ರಗಳೂ ರಾತ್ರಿಯೂ ಕಣ್ಮರೆಯಾಗಿಬಿಡುವದರಿಂದ ಸೂರ್ಯನೊಬ್ಬನೇ ಗ್ರಹರಾಜನು. ಹಾಗೂ ಹೆಚ್ಚಿನ ಬೆಳಕಾಗಿರುವನು-ಎಂದು ಋಷಿಯ ಅಭಿಪ್ರಾಯ. ಅಕ್ತುಭಿಃ-ಎಂದರೆ ರಾತ್ರಿಗಳೊಡನೆ ಎಂದರ್ಥ. ತ್ಯೇ ಎಂದರೆ ಪ್ರಸಿದ್ಧವಾದವುಗಳಾದ ಎಂದರ್ಥ. ಸೂರ್ಯಭಗವಂತನನ್ನು ಹೀಗೆ ನಕ್ಷತ್ರಗ್ರಹತಾರೆಗಳಿಗೆಲ್ಲ ಒಡೆಯನೆಂದು ಆದಿತ್ಯಹೃದಯವೆಂಬ ಸ್ತೋತ್ರದಲ್ಲಿಯೂ ತಿಳಿಸಿದೆ. ಮೂರನೆಯ ಮಂತ್ರವನ್ನು ಮುಂದೆ ವಿಚಾರಮಾಡೋಣ.

---

# ನಿತ್ಯರವಿವಾರವ್ರತ

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ವ್ರತಗಳ ವಿವರವನ್ನು ತಿಳಿಸುವ ಲೇಖನಮಾಲೆಯಲ್ಲಿ ಈಗ ನಿತ್ಯರವಿವಾರ ವ್ರತವನ್ನು ಕ್ರಮಪ್ರಾಪ್ತವಾಗಿರುವದರಿಂದ ವಿಚಾರಮಾಡಬೇಕಾಗಿದೆ. ಈ ಸಂದರ್ಭದಲ್ಲಿ ಸೂರ್ಯನ ಮಾಹಾತ್ಮ್ಯ ಹಾಗೂ ಉತ್ಪತ್ತ್ಯಾದಿಗಳನ್ನು ಕುರಿತೂ "ಸೌರಧರ್ಮೋತ್ತರಪುರಾಣ"ದಲ್ಲಿ ಹೇಳಿರುವ ಗ್ರಂಥಭಾಗವನ್ನು ನಿಬಂಧಕಾರರು ಉದಾಹರಿಸಿದ್ದಾರೆ. ಈ ವ್ರತದ ಪರಿಚಯವನ್ನು ಈಗ ಮಾಡಿಕೊಳ್ಳೋಣ.

ಈ ವ್ರತಾನುಷ್ಠಾನದ ವಿವರಗಳೇನನ್ನೂ ಇಲ್ಲಿ ಹೆಚ್ಚಾಗಿ ಪ್ರಸ್ತಾಪಿಸಿಲ್ಲ. ಆದರೆ ವ್ರತದ ಹೆಸರಿನಿಂದಲೇ ಇದನ್ನು ಪ್ರತಿಭಾನುವಾರವೂ ಮಾಡಬೇಕೆಂದು ಅರ್ಥವಾಗುತ್ತದೆ. ಪೂಜಾಕ್ರಮಗಳನ್ನೆಲ್ಲ ನಿರಶನಾರ್ಕವಾರವ್ರತದಂತೆಯೇ ಅಳವಡಿಸಿಕೊಳ್ಳಬೇಕು. ಕಥಾಭಾಗದಲ್ಲಿಯೂ ಮಾಹಾತ್ಮ್ಯ ಪ್ರತಿಪಾದಕವಾದ ಭಾಗವೇ ಹೆಚ್ಚಾಗಿದೆ. ಆದರೂ ಕೆಲವು ವಿಷಯಗಳು ಗ್ರಾಹ್ಯವಾಗಿದ್ದು ಸರ್ವರಿಗೂ ಉಪಯುಕ್ತವಾಗಿವೆ. ಇಂಥವುಗಳನ್ನು ಕುರಿತು ಈಗ ಪ್ರಸ್ತಾಪಿಸುವೆನು.

ಒಮ್ಮೆ ನೈಮಿಷಾರಣ್ಯದಲ್ಲಿ ಋಷಿಗಳು ಸಾವಿತ್ರೀಯಜ್ಞದೀಕ್ಷೆಯನ್ನು ಸ್ವೀಕರಿಸಿ ಸಂವತ್ಸರಕಾಲದ ಯಜ್ಞವೊಂದನ್ನು ಮಾಡುತ್ತಿದ್ದರು. ಅಲ್ಲಿಗೆ ವೇದವ್ಯಾಸರು ಬಂದರು. ಋಷಿಗಳೆಲ್ಲರೂ ಅವರನ್ನು ಪೂಜಿಸಿ ಸೂರ್ಯನ ಮಾಹಾತ್ಮ್ಯವನ್ನು ತಿಳಿಸುವಂತೆ ಕೇಳಿದರು. ಅದೇ ಸಮಯಕ್ಕೆ ನಾರದರೂ ಅಲ್ಲಿಗೆ ಬಂದರು. ಆಗ ಆ ನಾರದರ ಸಮ್ಮುಖದಲ್ಲಿ ಎಲ್ಲಾ ಋಷಿಗಳನ್ನೂ ಕುರಿತು ವೇದವ್ಯಾಸರು ಇಂತೆಂದರು : "ಎಲ್ಲ ಋಷಿಶ್ರೇಷ್ಠರೆ, ಕೇಳಿರಿ. ಇತಿಹಾಸಸಹಿತವಾಗಿ ಸೂರ್ಯನ ಪ್ರಭಾವವನ್ನು ಹೇಳುವೆನು. ಸಚ್ಚಿದಾನಂದರೂಪವಾದ ಪರಬ್ರಹ್ಮವೊಂದೇ ಅಖಂಡವಾಗಿ ಅದ್ವಿತೀಯವಾಗಿದ್ದುಕೊಂಡಿರುವದು. ಪ್ರಕೃತಿಯೆಂಬುದು ಆ ಬ್ರಹ್ಮದಲ್ಲಿಯೇ ಕಲ್ಪಿತವಾಗಿರುವ ಬ್ರಹ್ಮಾಧೀನವಾಗಿರುವ ಶಕ್ತಿವಿಶೇಷವು. ಆ ಪ್ರಕೃತಿಯು ಭಗವಂತನ ವಿಚಿತ್ರವಾದ ವಿಭೂತಿಯಾಗಿದ್ದು ಕಾಲರೂಪದಿಂದ ಬ್ರಹ್ಮದಲ್ಲಿಯೇ ಹೊರತೋರಿಕೊಂಡಿತು. ಎಲ್ಲಕ್ಕೂ ಸಾಕ್ಷಿಯಾದ ಬ್ರಹ್ಮವು ಅದನ್ನು ನೋಡಿತು. ಹಾಗೆ ನೋಡಿದ್ದರಿಂದ ಅದರಿಂದ ತೇಜಸ್ಸು ಹೊರಬಂದಿತು. ಆ ದಿನವೇ ಸೃಷ್ಟಿಯ ಆರಂಭದಿನವಾಗಿತ್ತು. ಅದನ್ನು ಭಾನುವಾರವೆಂದು ಹೆಸರಿಸಲಾಯಿತು. ಆ ವಾರಕ್ಕೆ ಭಾಸ್ಕರರೂಪಿಯಾದ ಶ್ರೀಹರಿಯೇ ಅಧಿಪತಿಯಾದನು. ಹೀಗೆ ಹೊರಬಿದ್ದಂಥ ತೇಜಸ್ಸು ಒಂದು ಮಂಡಲಾಕಾರವಾಗಿ ಆಕಾಶವನ್ನಲಂಕರಿಸಿತು. ಅದರಲ್ಲೇ ಪರಮಾತ್ಮನು ನೆಲಸಿದನು. ಅಂದಿನಿಂದ ಅದು ಸೂರ್ಯನೆಂದೂ ಜಗಚ್ಚಕ್ಷುವೆಂದೂ ಕರೆಯಲ್ಪಟ್ಟಿತು. ಈ ಸೂರ್ಯದೇವತೆಯನ್ನು ಕಾಲ-ಧರ್ಮಗಳ ವ್ಯವಹಾರವನ್ನು

ನಿರ್ವಹಿಸುವಂತೆ ಭಗವಂತನು ನಿಯಮಿಸಿದನು. ಅವನಿಗೆ ಸಂಚಾರಕ್ಕಾಗಿ ಓಂಕಾರ ರೂಪವಾದ ರಥವೊಂದನ್ನು ಸೃಷ್ಟಿಸಿ ಒಂದೇ ಕುದುರೆಯನ್ನು ಬಿಗಿದು ಒಂದೇ ಚಕ್ರದಿಂದ ಓಡುವಂತೆ ನಿರ್ಮಿಸಲಾಯಿತು. ಮಹಾವಾಯುವು ಆ ರಥವನ್ನು ಆಕಾಶದಲ್ಲಿ ಸಂಚರಿಸುವಂತೆ ಮಾಡಿರುವನು. ಅದರ ನಾಯಕನಾದ ಸೂರ್ಯನನ್ನು ಕಶ್ಯಪರ ತಪೋಬಲದಿಂದಲೂ ಕೂಡಿಸಿದ್ದರಿಂದ ಬ್ರಹ್ಮತೇಜೋಮಯನಾದ ಸೂರ್ಯನು ಕಶ್ಯಪರ ಪುತ್ರನೆಂದೂ ಕರೆಯಲ್ಪಡುವನು. ಹೀಗೆ ವೇದಮಯನೂ ಮಹಾವೀರ್ಯಶಾಲಿಯೂ ಆದ ಸೂರ್ಯನಿಗೆ ದಕ್ಷಪ್ರಜಾಪತಿಯು ತನ್ನ ಮಗಳಾದ ಛಾಯಾದೇವಿಯನ್ನು ಕೊಟ್ಟನು. ಆಗ ಛಾಯಾಸಮೇತನಾದ ಸೂರ್ಯನು ರಥದಲ್ಲಿ ಕುಳಿತು ಸಂಚರಿಸುತ್ತಿದ್ದುದರಿಂದ ೧೨ ಸಹಸ್ರ ವರ್ಷಗಳಕಾಲ ಉದಯಾಸ್ತಮಾನಗಳು, ಸಂಧ್ಯಾಕಾಲ, ಸಂಕ್ರಾಂತಿಗಳು, ಲೋಕರಕ್ಷಣೆಗಳು ಸಾಗಿದವು.

ಆದರೆ ಸೂರ್ಯನ ತೇಜಸ್ಸನ್ನು ತಡೆಯಲಾರದೆ ಛಾಯಾದೇವಿಯು ಬಹಳ ಕೃಶಳಾಗಿ ತಂದೆತಾಯಿಗಳನ್ನು ಕಾಣುವ ಉದ್ದೇಶದಿಂದ ತಂದೆಯ ಮನೆಗೆ ಬಂದಳು. ಸೂರ್ಯನಿಲ್ಲದೆ ಒಬ್ಬಳೇ ಏಕೆ ಬಂದೆ? ಎಂದು ತಂದೆಯು ಕೇಳಲಾಗಿ ಬಹಳ ವರ್ಷಗಳಾದರೂ ಸೂರ್ಯನು ತನ್ನನ್ನು ಮಾತನಾಡಿಸಲಿಲ್ಲವೆಂದೂ ಬಹಿರ್ಮುಖನೂ ಆಗದೆ ಧ್ಯಾನದಲ್ಲಿದ್ದುಕೊಂಡಿರುವನೆಂದೂ ಅವನ ತೇಜಸ್ಸನ್ನು ತಾಳಲಾರದೆ ತಾನು ಬಂದುದಾಗಿಯೂ ಆಕೆಯು ಹೇಳಿದಳು. ಆಗ ದಕ್ಷನು ಕೋಪಗೊಂಡು ಆಕೆಯನ್ನು ಹೆಣ್ಣು ಕುದುರೆಯಾಗಿ ಮಾರ್ಪಡುವಂತೆಯೂ ಸೂರ್ಯನಿಂದಲೇ ಶಾಪವಿಮೋಚನೆ ಆದೀತೆಂದೂ ಶಪಿಸಿಬಿಟ್ಟನು. ಅದರಂತೆಯೇ ಆಕೆಯು ಕುದುರೆಯಾದಳು. ಇತ್ತಲಾಗಿ ಸೂರ್ಯರಥದಲ್ಲೇ ಇದ್ದ ಸಂಜ್ಞೆಯೆಂಬ ಮತ್ತೊಬ್ಬ ಸ್ತ್ರೀಯು ಸೂರ್ಯನ ಸೇವೆಯನ್ನು ಮಾಡುತ್ತಿದ್ದಳು. ಆದರೂ ಧರ್ಮಪತ್ನಿಯ ಸೇವೆಯಿಲ್ಲದ ಫಲವಾಗಿ ಸೂರ್ಯನ ತಪಸ್ಸು ಕ್ಷೀಣಿಸಿ ಅವನು ಎಚ್ಚತ್ತನು. ಆಕೆಯೊಡಗೂಡಿಯೇ ಗಾರ್ಹಸ್ಥ್ಯಕರ್ಮಗಳನ್ನೂ ಮಾಡುತ್ತಾ ಅವಳಲ್ಲಿ ಬೆರೆತನು. ಆಗ ಶನೈಶ್ಚರನೆಂಬ ಕಪ್ಪುಬಣ್ಣದ ಮಗನೊಬ್ಬನು ಹುಟ್ಟಿದನು. ಅವನ ಆಕಾರರೂಪಗಳಿಂದ ಅತೃಪ್ತನಾದ ಸೂರ್ಯನು ಮತ್ತೊಮ್ಮೆ ಆಕೆಯನ್ನು ಕೂಡಿದಾಗ ಯಮನೆಂಬ ಮಗನು ಹುಟ್ಟಿದನು. ಅವನೂ ಸೂರ್ಯನಿಗೆ ಅನುರೂಪನಾಗಿರಲಿಲ್ಲ. ಮೂರನೆಯ ಬಾರಿಗೆ ಕೂಡಿದಾಗ ಯಮುನೆಯೆಂಬ ಮಗಳು ಹುಟ್ಟಿದಳು. ಯಾವ ಮಗುವೂ ತನ್ನಂತೆ ಇಲ್ಲದಿರುವದನ್ನು ಕಂಡು 'ಛಾಯೆ, ಹೀಗೇಕಾಯಿತು ?' ಎಂದು ಕೇಳಿದನು. ಆಗ ಸಂಜ್ಞೆಯು ತನ್ನ ನಿಜವೃತ್ತಾಂತವನ್ನು ತಿಳಿಸಿ ಕ್ಷಮಿಸುವಂತೆ ಬೇಡಿಕೊಂಡಳು. ಸೂರ್ಯನು ಜ್ಞಾನದೃಷ್ಟಿಯಿಂದ ಎಲ್ಲವನ್ನೂ ವಿಚಾರಮಾಡಿ ಬಹಳ ಬೇಸರಗೊಂಡವನಾಗಿ ತನ್ನ ನಿಜವಾದ ಹೆಂಡತಿಯಾದ ಛಾಯೆಯನ್ನು ಹುಡುಕಿಕೊಂಡು ಹೊರಟನು. ಹೊರಡುವಾಗ ರಥದ ಕಾವಲಿಗಾಗಿ ಬುಧನನ್ನು ನಿಯಮಿಸಿದ್ದನು. ತಾನು ಮೇರುಭೂಮಿಯನ್ನು ಹೊಕ್ಕು ಅಲ್ಲಿ ಕುದುರೆಯ ರೂಪಳಾ

ಗಿದ್ದ ಛಾಯೆಯನ್ನು ಗುರುತಿಸಿ ಅವಳನ್ನು ಕೂಡಿ ಅಶ್ವಿನೀಕುಮಾರರೆಂಬ ಇಬ್ಬರು ಮಕ್ಕಳನ್ನು ಪಡೆದನು.

ಈ ನಡುವೆ ಬುಧನು ಸೂರ್ಯರಥವನ್ನು ನಡೆಸುವಾಗ ಅದು ಸರಿಯಾದ ಬಲವಿಲ್ಲದೆ ಸ್ವೇಚ್ಛೆಯಾಗಿ ತಿರುಗಿತು. ಕೆಲವುಕಡೆ ಬಹಳ ಮೆಲ್ಲನೆ, ಕೆಲವುಕಡೆ ಬಹಳ ಬೇಗನೆ- ಸಂಚರಿಸುತ್ತಾ ಮೂರು ಮುಹೂರ್ತದಲ್ಲಿ ಮೇರುವನ್ನು ಸುತ್ತಿ ನಿಂತುಬಿಟ್ಟಿತು. ಹಾಗೆಯೇ ಕೆಲವು ಸಲ ಭೂಮಿಗೆ ತೀರ ಹತ್ತಿರವಾಗಿಯೂ ಕೆಲವು ಸಲ ಸ್ವರ್ಗಕ್ಕೆ ಹತ್ತಿರವಾಗಿಯೂ ಸಂಚರಿಸಿ ತನ್ನ 'ವಿಷುವ' ವೆಂಬ ಜಾಗವನ್ನು ಬಿಟ್ಟು ಅಡ್ಡಾದಿಡ್ಡಿಯಾಗಿ ಚಲಿಸಿಬಿಟ್ಟಿತು. ಇದರಿಂದ ಕಾಲವ್ಯವಸ್ಥೆಯೆಲ್ಲ ಅಲ್ಲೋಲಕಲ್ಲೋಲವಾಗಿ ಭೂಲೋಕಸ್ವರ್ಗಲೋಕಗಳೆರಡೂ ನಾಶವಾಗಿಬಿಡುವಂತಾಯಿತು. ಆಗ ದೇವತೆಗಳೂ ಸಿದ್ಧರೂ ಮಹರ್ಷಿಗಳೂ ಬಹಳ ಶ್ರಮಪಟ್ಟು ತಮ್ಮ ತಪಃಫಲದಿಂದ ಅದನ್ನು ಆಕಾಶದಲ್ಲಿ ನಿಲ್ಲಿಸಿದರು. ಅನಂತರ ಬ್ರಹ್ಮಾದಿ ದೇವತೆಗಳೂ ಲಕ್ಷ್ಮ್ಯಾದಿದೇವಿಯರೂ ರಥವನ್ನೇರಿ ನಡೆಯಿಸಿದರಾದರೂ ಅಲ್ಪಸ್ವಲ್ಪ ಗತಿವ್ಯತ್ಯಾಸದಿಂದ ಕೂಡಿದ್ದು ಪ್ರಪಂಚಕ್ಕೆ ಹಾನಿಯಾಗುವದು ಉಳಿಯಿತು. ಮುಂದೆ ಬ್ರಹ್ಮಾದಿದೇವತೆಗಳೆಲ್ಲರೂ ಸೇರಿ ಸೂರ್ಯನನ್ನು ಪ್ರಾರ್ಥಿಸಿ ಆತನನ್ನೇ ರಥವಲ್ಲಿ ಕೂಡಿಸಿದರು. ಅವನ ಇಬ್ಬರು ಅವಳಿಮಕ್ಕಳಾದ ಅಶ್ವಿನಿದೇವತೆಗಳಿಗೆ ದೇವವೈದ್ಯರ ಸ್ಥಾನವನ್ನೂ, ಶನೈಶ್ಚರನಿಗೆ ಗ್ರಹಮಂಡಲದಲ್ಲಿ ಸ್ಥಾನವನ್ನೂ ಮಕರಕುಂಭರಾಶಿಗಳ ಒಡೆತನವನ್ನೂ ನೀಡಿ ಎಲ್ಲಾ ಪ್ರಾಣಿಗಳ ಕರ್ಮಗಳಿಗೆ ಫಲವನ್ನೂ ಕೊಡುವಂತೆ ನಿಯಮಿಸಿದರು. ಯಮನಿಗೆ ಎಲ್ಲರ ಕರ್ಮಗಳನ್ನೂ ನಿಯಮಿಸುವ ಹಾಗೂ ಪ್ರಾಣಿಗಳ ಪಾಪಪುಣ್ಯಗಳನ್ನು ವಿಚಾರಮಾಡಿ ಶಿಕ್ಷೆ ವಿಧಿಸುವ ಅಧಿಕಾರವನ್ನು ನೀಡಿ ಸೂರ್ಯನನ್ನು ಸಂತೋಷಗೊಳಿಸಿದರು. ಆಗ ಸೂರ್ಯನು ಎಂದಿನಂತೆ ರಥವನ್ನೇರಿ ಲೋಕಕ್ಷೇಮವುಂಟುಮಾಡಿದನು. ಬ್ರಹ್ಮಾದಿ ಸಮಸ್ತ ದೇವತೆಗಳೂ ತಮ್ಮತಮ್ಮ ತಪಸ್ಸು, ಯೋಗ, ಬಲಾದಿಗಳನ್ನು ಸೂರ್ಯನಿಗೆ ವರಗಳಾಗಿ ನೀಡಿದರು. ಅನಂತರ ಮಂದೇಹರೆಂಬ ರಾಕ್ಷಸರು ಸೂರ್ಯನ ಗತಿಗೆ ವಿಘ್ನವುಂಟುಮಾಡಿದಾಗ ಬ್ರಹ್ಮಾದಿದೇವತೆಗಳೂ ಋಷಿಗಳೂ ಅರ್ಘ್ಯಪ್ರದಾನಮಾಡಿ ರಾಕ್ಷಸರ ಬಾಧೆಯನ್ನು ಶಮನಗೊಳಿಸಿದರು. ಇಷ್ಟೆಲ್ಲ ಭಾನುವಾರದ ದಿನವೇ ನಡೆಯಿತು. ಆದ್ದರಿಂದ ಯಾರು ತಪ್ಪದೆ ಪ್ರತಿಭಾನುವಾರವೂ ಸೂರ್ಯನನ್ನು ಆರಾಧಿಸುವರೋ ಅಂಥವರು ಸಕಲವಿಪತ್ತುಗಳಿಂದಲೂ ಪಾರಾಗಿ ಆಯುರಾರೋಗ್ಯಾದಿಗಳನ್ನು ಪಡೆದು ಸೂರ್ಯನ ಕೃಪೆಯಿಂದ ಸಕಲಸಿದ್ಧಿಗಳನ್ನೂ ಹೊಂದುವರೆಂದು ವೇದವ್ಯಾಸರು ತಿಳಿಸಿದ್ದಾರೆ. ಇದೇ ರವಿವಾರದ ಮಾಹಾತ್ಮ್ಯೆಯು.

---

# ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು

**ಪ್ರಶ್ನೆ :** ಬ್ರಹ್ಮವಿದ್ಯೆಯಿಂದ ಮುಕ್ತಿಯೆಂಬ ಪರಮಪುರುಷಾರ್ಥವನ್ನು ಪಡೆಯಲು ಮಾನವನಿಗೆ ಜಾತಿಯ ನಿರ್ಬಂಧವುಂಟೆ?

**ಉತ್ತರ :** ಖಂಡಿತ ಇರುವದಿಲ್ಲ. ಏಕೆಂದರೆ ಹಿಂದಿನ ಯುಗಗಳಿಂದಲೂ ಈವರೆಗೂ ಬ್ರಹ್ಮವಿದರಲ್ಲಿ ಎಲ್ಲಾ ಜಾತಿಯವರೂ ಇರುತ್ತಾರೆ. ನಿಜವೇನೆಂದರೆ: ಜ್ಞಾನವುಂಟಾದಮೇಲೆ ಜಾತಿಮತಆಶ್ರಮಾದಿ ಯಾವ ಭೇದಗಳೂ ಉಳಿಯುವದೇ ಇಲ್ಲ. ನದಿಯು ಸಮುದ್ರವನ್ನು ಸೇರಿದಮೇಲೆ ಅದರ ಹೆಸರು, ರೂಪಾದಿಗಳು ಉಳಿಯುವದುಂಟೆ?

**ಪ್ರಶ್ನೆ :** ಹಾಗಾದರೆ ಮೋಕ್ಷವನ್ನು ಪಡೆಯಲು ಬ್ರಾಹ್ಮಣರಾಗಬೇಕಾದದ್ದೇನೂ ಇಲ್ಲವಷ್ಟೆ? ಬ್ರಾಹ್ಮಣೇತರರೂ ಮುಕ್ತರಾಗಿ ಉದ್ಧಾರವಾಗಿರುವ ವಿಷಯಕ್ಕೆ ಯಾರನ್ನಾದರೂ ಉದಾಹರಿಸಬಲ್ಲಿರಾ?

**ಉತ್ತರ :** ಧಾರಾಳವಾಗಿ ಆಗಬಹುದು. ಬ್ರಹ್ಮಸೂತ್ರಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರೇ ಈ ವಿಷಯಕ್ಕೆ ತಾವೇ ಮುಂದುವರೆದು ವಿದುರ, ಧರ್ಮವ್ಯಾಧ -ಮುಂತಾದ ಬ್ರಾಹ್ಮಣೇತರಜಾತಿಯ ಜ್ಞಾನಿಗಳನ್ನು ಉದಾಹರಿಸಿ ಗೌರವಿಸಿದ್ದಾರೆ. ಜ್ಞಾನವನ್ನು ಬ್ರಾಹ್ಮಣೇತರರು ಸಂಪಾದಿಸಿಕೊಳ್ಳಬಾರದು- ಎಂದು ಹೇಳಲು ಯಾರಿಗೂ ಹಕ್ಕಿಲ್ಲ. ಇಷ್ಟೇ ಅಲ್ಲ. ಜ್ಞಾನವನ್ನು ಈಗಾಗಲೇ ಸಂಪಾದಿಸಿಕೊಂಡೇ ಬಿಟ್ಟಿರುವ ಮಹಾತ್ಮರನ್ನು ಮೋಕ್ಷವನ್ನು ಪಡೆಯದಂತೆ ಅಡ್ಡಿಪಡಿಸಲು ಯಾವ ಬ್ರಾಹ್ಮಣನಿಗಾಗಲಿ, ಮಹಾರಾಜನಿಗಾಗಲಿ, ಸಾಹುಕಾರನಿಗಾಗಲಿ, ಅಧಿಕಾರಿಗಾಗಲಿ, ಸಾಧ್ಯವಿಲ್ಲವೆಂದೇ ಆ ಮಹನೀಯರು ಸಾರಿರುತ್ತಾರೆ.

**ಪ್ರಶ್ನೆ :** ಹೀಗಿದ್ದರೂ ಮತಾಚಾರ್ಯರುಗಳು ಸಮಾಜದಲ್ಲಿ ಬ್ರಾಹ್ಮಣಾದಿ ಜಾತಿಗಳನ್ನು ಹುಟ್ಟಿಹಾಕಿ ಪಕ್ಷಪಾತಮಾಡಿದ್ದಾರೆಂದು ಕೆಲವರು ವೃಥಾ ದೂರುತ್ತಾರಲ್ಲ, ಏಕೆ?

**ಉತ್ತರ :** ಇದು ಆಯಾ ಮತಾಚಾರ್ಯರ ಅಭಿಪ್ರಾಯಗಳನ್ನು ಸರಿಯಾಗಿ ತಿಳಿದುಕೊಳ್ಳದ್ದರ ಫಲವಾಗಿದೆ. ಅಥವಾ ಯಾರಾದರೂ ಪ್ರಸಿದ್ಧ ಪುರುಷರನ್ನೊ, ಮತಗ್ರಂಥವನ್ನೊ, ಸನಾತನಧರ್ಮೀಯರ ಆಚಾರಗಳನ್ನೊ- ದೂರಿದರೆ ಆ ಮೂಲಕ ತಾವು ಪ್ರಸಿದ್ಧಿಗೆ ಬರಬಹುದು- ಎಂಬ ಅಭಿಪ್ರಾಯವೂ ಅಂಥವರಿಗೆ ಇರಬಹುದು. ಅದು ಹೇಗೇ ಇರಲಿ, ಜನರು ನಿಜವೇನೆಂಬುದನ್ನರಿಯಲು ಪ್ರಯತ್ನಮಾಡಿದ್ದೇ ಆದರೆ, ಕಟ್ಟಿಗೆಯಿಲ್ಲದ ಜಾಗದಲ್ಲಿ ಬಿದ್ದ ಬೆಂಕಿಯು ತಾನೇ ತಣ್ಣಗಾಗುವಂತೆ-ಅವರೇ ಸುಮ್ಮನಾಗುತ್ತಾರೆ. ಒಂದು ವೇಳೆ ನಿಜವನ್ನೇ ಕಂಡುಕೊಳ್ಳುವ ಇಚ್ಛೆಯಿಂದ ಅವರು ಬಲ್ಲವರನ್ನು ಬಳಿಸಾರಿದ್ದೇ ಆದರೆ ಅವರೂ ಉದ್ಧಾರವಾಗಿಬಿಡುವರು. ಭಗವಂತನಿಗೆ ಅಂಥವರನ್ನು ಉದ್ಧಾರಮಾಡಬೇಕೆಂಬ ಸಂಕಲ್ಪವುಂಟಾದರೆ ಆತನು ಹಾಗೂ ಮಾಡಬಲ್ಲನು. ನಾವೇಕೆ ಅವರನ್ನು ದ್ವೇಷಿಸೋಣ?

**ಪ್ರಶ್ನೆ :** ಈಗಿನ ಸಮಾಜದಲ್ಲಿಯೂ ಬ್ರಾಹ್ಮಣನೆಂದರೆ ಅದೇನೊ, ಅಷ್ಟಿಷ್ಟು ಗೌರವವಿದೆ. ಈಗಲೂ ಬ್ರಾಹ್ಮಣರನ್ನು ಉಳಿದವರು ತಮ್ಮ ಧರ್ಮ ಕರ್ಮಗಳ ನಡೆವಳಿಕೆ ಹಾಗೂ ಅನುಷ್ಠಾನಗಳಿಗಾಗಿ ಕರೆಯುತ್ತಾರೆ. ಗೌರವಿಸು ತ್ತಲೂ ಇದ್ದಾರೆ. ಆದ್ದರಿಂದ ಎಲ್ಲರನ್ನೂ ಬ್ರಾಹ್ಮಣರನ್ನಾಗಿಯೇ ಪರಿವರ್ತಿಸಿ ಬಿಡುವದೇ ಕ್ಷೇಮವಲ್ಲವೆ?

**ಉತ್ತರ :** ಹಾಗಾಗಲಾರದು. ಸಂಗೀತವನ್ನು ಕೇಳುವ ಶ್ರೋತೃಗಳೆಲ್ಲ ತಾವೇ ಸಂಗೀತಗಾರರಾಗಿಬಿಡುವದು ಹೇಗೆ ಅಸಾಧ್ಯವೋ, ಹಣ ತೆತ್ತು ಟಿಕೇಟು ಕೊಂಡಿದ್ದರೂ ಅಥವಾ ಇಡಿಯ ಬಸ್ಸನ್ನೇ ಸಾವೇ ಎಂಗೇಜ್‌ಮಾಡಿದ್ದರೂ ಎಲ್ಲರೂ ಬಸ್ಸನ್ನು ಡ್ರೈವ್ ಮಾಡುವದು ಹೇಗೆ ಸರಿಯಲ್ಲವೋ ಹಾಗೆಯೇ ಧರ್ಮ-ಜ್ಞಾನ ಗಳ ಅನುಷ್ಠಾನ, ಪ್ರಸಾರ, ಮೇಲುಪಂಕ್ತಿಗಾಗಿ ಹಿಂದಿನಿಂದಲೂ ಗೊತ್ತುಮಾಡ ಲ್ಪಟ್ಟಿರುವ ಬ್ರಾಹ್ಮಣನನ್ನು- ಎಲ್ಲರೂ ತಾವೇ ಬ್ರಾಹ್ಮಣರಾಗುವದಕ್ಕಿಂತಲೂ -ಅನುಸರಿಸುವದೇ ಶ್ರೇಯಸ್ಕರವೂ ಕ್ಷೇಮಕರವೂ ಆಗಲಿದೆ. ಇಲ್ಲವಾದರೆ ಆದರ್ಶ ವಿಲ್ಲದೆ ಹೋದೀತು. ಕನ್ನಡಿಯೇ ಬೇಡವೆಂದರೆ ನಾವು ಮುಖನೋಡಿಕೊಂಡು ಓರೆಕೋರೆಗಳನ್ನು ತಿದ್ದಿಕೊಳ್ಳುವದಾದರೂ ಹೇಗೆ?

**ಪ್ರಶ್ನೆ :** ನೀವು ಹೇಳುವಂತೆ ಈಗಿನ ಕಾಲದಲ್ಲಿ ಬ್ರಾಹ್ಮಣರು ಆದರ್ಶರಾಗಿ ಸಮಾಜದಲ್ಲಿ ಕಂಡುಬರುತ್ತಿಲ್ಲವಲ್ಲ?

**ಉತ್ತರ :** ಅಂಥವರನ್ನು ನೀವು ಅನುಸರಿಸಲೂ ಬಾರದು. ಗೌರವಿಸಲೂ ಬಾರದು. ಆದರೆ 'ಬ್ರಾಹ್ಮಣ' ಎಂಬ ಶಬ್ದಕ್ಕೆ ಮರುಳಾದರೆ,ಹೊಟ್ಟು-ಅಕ್ಕಿಗಳನ್ನು ವಿಂಗಡಿಸದೆ ಎಲ್ಲವನ್ನೂ ಬಿಸಾಡಿದರೆ ಹೇಗೆ ನಷ್ಟವೋ ಹಾಗೆ ನಿಜವಾದ ಬ್ರಾಹ್ಮಣ ರನ್ನೂ ತಿರಸ್ಕರಿಸಿದರೆ ಸಮಾಜಕ್ಕೂ ರಾಷ್ಟ್ರಕ್ಕೂ ನಷ್ಟವಲ್ಲವೆ? ಈ ವಿವೇಚನೆ ಪ್ರಜೆಗಳಲ್ಲಿ ಬರಬೇಡವೆ? ಇಂಥ ವಿವೇಚನೆಯು ಉಳಿದ ವೈಜ್ಞಾನಿಕ, ವೈದ್ಯಕೀಯ, ಯಾಂತ್ರಿಕಕ್ಷೇತ್ರಗಳಲ್ಲಿಯೂ ಪಸರಿಸದೆ ಇರುವದರಿಂದ ಭಾರತದೇಶವು ಅನೇಕ ಪ್ರತಿಭಾವಂತರನ್ನು ಕಳೆದುಕೊಳ್ಳುತ್ತಿಲ್ಲವೆ? ಜ್ಞಾನ, ವಿಜ್ಞಾನ- ಎಲ್ಲವೂ ಕಣ್ಮರೆ ಯಾಗಿ ಅಜ್ಞಾನ, ಅನಾಚಾರ, ಅನೀತಿಗಳೇ ಉಳಿಯಲೆಂದಿಚ್ಛಿಸುವಿರಾ?

**ಪ್ರಶ್ನೆ :** ಹಾಗಾದರೆ ಅಧ್ಯಾತ್ಮಜ್ಞಾನವು ಅದರಲ್ಲಿ ಪರಿಣತರಾದವರ ಮೂಲಕ ಎಲ್ಲರಿಗೂ ಬೇಕೆಂದೂ ಅದಕ್ಕೆ ಆದರ್ಶವೊಂದಿರಬೇಕೆಂದೂ ಅದನ್ನು ಕಾಪಾಡಬೇಕೆಂದೂ ಆಯಿತಲ್ಲ?

**ಉತ್ತರ :** ಹಾಗೆ ದಾರಿಗೆ ಬನ್ನಿರಿ. ಕೇವಲ ಮತದ್ವೇಷದಿಂದಾಗಲಿ, ಧರ್ಮದ್ವೇಷದಿಂದಾಗಲಿ ಏನೂ ಸಾಧಿಸಲಾಗದು. ಬೆಂಕಿಯನ್ನು ಬೆಂಕಿಯಿಂದಲೇ ಆರಿಸಲು ಹೋಗಬೇಡಿ. ಬೆಂಕಿಯನ್ನುಪಯೋಗಿಸಿಕೊಂಡು ಅಡಿಗೆ ಮಾಡಿಕೊಂಡು ಹೊಟ್ಟೆತುಂಬಿಕೊಳ್ಳಿರಿ.

———

# ಭಗವದ್ಗೀತೆಯಲ್ಲಿ ಸಾಧನ

(ಶ್ರೀ ಚಂದ್ರಶೇಖರಯ್ಯ ಉಬರಡ್ಕ, ಇಂಗ್ಲಿಷ್ ಪ್ರೊಫೆಸರ್,
ರೀಜನಲ್ ಕಾಲೇಜು, ಮೈಸೂರು)*

ವೈದಿಕಧರ್ಮಗ್ರಂಥಗಳಲ್ಲಿ ಭಗವದ್ಗೀತೆಯು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ವೇದೋಪನಿಷತ್ತುಗಳಲ್ಲಿಯೂ ಸಮಸ್ತಮಾನವಕೋಟಿಗೂ ಅನ್ವಯಿಸುವಂಥ ತತ್ತ್ವವಿಚಾರಗಳು ಇವೆಯಾದರೂ ಅವು ಬಹುಮಟ್ಟಿಗೆ ವೈದಿಕಸಂಸ್ಕೃತಿಯ ಚೌಕಟ್ಟಿಗೇ ಸೀಮಿತವಾಗಿವೆ. ಗೀತೆಯಾದರೊ, ತನ್ನ ಸರಳತೆ, ಸಂಕ್ಷಿಪ್ತತೆ, ಅರ್ವಾಚೀನತೆಗಳಿಂದಲೂ ವಿಶ್ವಮಾನವರ ಮಟ್ಟದಲ್ಲಿ ಅನ್ವಯಿಸುವಂಥ ನಿರ್ಬಂಧರಹಿತ ವಿಚಾರಕ್ರಮದಿಂದಲೂ ಇಂದು ಜಗತ್ತಿನ ಎಲ್ಲ ದೇಶಗಳಲ್ಲಿಯೂ ಸ್ವೀಕೃತವಾಗಿದೆ. ಸಂಸಾರದಲ್ಲಿ ತೊಡಗಿರುವ ಸಾಮಾನ್ಯವ್ಯಕ್ತಿಗೂ ಸಹ–ಅವನು ಗಂಡಿರಲಿ, ಹೆಣ್ಣಿರಲಿ, ಬುದ್ಧಿಜೀವಿಯಿರಲಿ, ಕಾರ್ಮಿಕನಾಗಿರಲಿ, ಐಶ್ವರ್ಯ– ಅಂತಸ್ತು ಏನನ್ನೂ ಲೆಕ್ಕಿಸದೆ ಎಲ್ಲರಿಗೂ ಸಮಾನವಾಗಿ ಪರಮಪುರುಷಾರ್ಥದ್ವಾರವನ್ನು ಅದು ತೆರೆದಿಟ್ಟಿದೆ. ಸ್ವಕರ್ಮ-ಸ್ವಧರ್ಮಗಳನ್ನು ಅನುಷ್ಠಾನಮಾಡುತ್ತಿರುವಾಗಲೇ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಬಹುದಾದ ಮಹತ್ತಾದ ರಹಸ್ಯವನ್ನು ಕರ್ಮಯೋಗವೆಂಬ ಹೆಸರಿನಿಂದ ಗೀತೆಯು ಬಯಲುಮಾಡಿಟ್ಟಿದೆ.

ಗೀತಾಚಾರ್ಯನ ಬೋಧೆಯಂತೆ ಮಾನವನ ಅಂತಿಮಗುರಿಯು ಜ್ಞಾನವೇ ಆಗಿರುವದರಿಂದ 'ಈಗಲೆ ಕರ್ಮಗಳನ್ನೆಲ್ಲ ಬಿಟ್ಟುಬಿಡೋಣ'– ಎಂಬ ಅಜ್ಞನಿಗೆ 'ನ ಕರ್ಮಣಾಮನಾರಂಭಾತ್' ಎಂದು ಅದು ಎಚ್ಚರಿಸುತ್ತದೆ. ಕರ್ಮವೆಂದರೆ ದೈಹಿಕವಾಗಿ ನಡೆಯುವ ಉಸಿರಾಟ, ರೆಪ್ಪೆಬಡಿದಾಟಗಳೂ ಸೇರಿಬಿಡುವದರಿಂದ ಕರ್ಮತ್ಯಾಗವು ಎಂಥವನಿಗೂ ಪೂರ್ಣವಾಗಿ ಅಸಾಧ್ಯವೇ ಆಗಿದೆ. ಆದ್ದರಿಂದ ಅಜ್ಞನಾದವನು ತನ್ನ ಕರ್ಮಗಳನ್ನು 'ಯಜ್ಞ'ವಾಗಿ ಪರಿವರ್ತಿಸಿಕೊಳ್ಳಲು ತಿಳಿಸುತ್ತದೆ. ಯಜ್ಞವೆಂದರೆ ಕೇವಲ ಹೋಮಹವನಗಳಲ್ಲ. 'ನಾರಾಯಣಾಯೇತಿ ಸಮರ್ಪಯಾಮಿ' ಎಂಬ ಮನೋಭಾವವೇ ಯಜ್ಞದ ತಿರುಳು. ಹಾಗಿಲ್ಲದೆ ಬಹಿರಂಗವಾಗಿ ಮಾತ್ರ ಕರ್ಮತ್ಯಾಗಮಾಡಿ ಮನಸ್ಸಿನಲ್ಲೇ ಫಲಾನುಸಂಧಾನ ಮಾಡುತ್ತಿದ್ದರೆ ಅದು ಮಿಥ್ಯಾಚಾರವೆನಿಸುತ್ತದೆ. ಆದ್ದರಿಂದ ಸಹಜವಾದ ಕರ್ಮಗಳನ್ನು ಸದೋಷವಾಗಿದ್ದರೂ ಬಿಡಬಾರದೆಂಬುದೇ ಗೀತೆಯ ಅಭಿಪ್ರಾಯ. ಅದರಲ್ಲಿಯೂ ಚಿತ್ತಶುದ್ಧಿಗೂ ಜ್ಞಾನಪ್ರಾಪ್ತಿಗೂ ಉಪಾಯಗಳಾಗಿ ಶಾಸ್ತ್ರದಲ್ಲಿ ಹೇಳಿರುವ ಯಜ್ಞದಾನತಪಸ್ಸುಗಳನ್ನು ಪ್ರತಿಯೊಬ್ಬನೂ ಕೈಗೊಳ್ಳಲೇಬೇಕೆಂಬುದೇ ಗೀತೆಯ ಗುರಿಯಾಗಿರುತ್ತದೆ.

---

* ಶ್ರೀಯುತರು 17–12–83 ರಂದು ಅಧ್ಯಾತ್ಮಪ್ರಕಾಶಕಾರ್ಯಾಲಯದ ಮೈಸೂರು ಶಾಖೆಯಲ್ಲಿ ಮಾಡಿದ ಭಾಷಣದ ಸಾರಾಂಶವಿದು.

ಕರ್ಮವನ್ನು ಬಿಡಬಾರದೇಕೆಂದರೆ ಜಗಚ್ಚಕ್ರಪ್ರವರ್ತನೆಯು ಪ್ರತಿಯೊಬ್ಬ ಮಾನವನ ಅವಶ್ಯಕರ್ತವ್ಯವಾಗಿದೆ. ಅದನ್ನು ಯಾವನೊಬ್ಬನೂ ಉದಾಸೀನ ಮಾಡಬಾರದು. ಇದರಿಂದ ಸೃಷ್ಟಿಚಕ್ರವನ್ನು ತಿರುಗಿಸುವ ಕಾರ್ಯದಲ್ಲಿ ನಾವೂ ಹೆಗಲು ಕೊಟ್ಟಂತಾಗಿ ಮಾನವನೆಂದರೆ ಕ್ಷುದ್ರಜಂತುವಲ್ಲ, ಅವನ ಕರ್ತವ್ಯವು ಬಹು ಬೆಲೆಬಾಳತಕ್ಕದ್ದು- ಎಂದು ಗೊತ್ತಾಗುತ್ತದೆ. ಮಾನವನು ಸೃಷ್ಟಿಯ ಅವಿಭಾಜ್ಯ ಅಂಗ; ಆತನ ಮೂಲಕ ನಡೆಯುವ ಕರ್ಮಗಳೆಲ್ಲವೂ ಪ್ರಕೃತಿಮಾತೆಯ ಕರ್ಮಪ್ರವಾಹದ ಅಲೆಗಳೇ ಆಗಿರುವವು. ಆದರೆ ತಾನು ಮಾಡುತ್ತೇನೆ-ಎಂಬಿದು ಮಾತ್ರ ಸುಳ್ಳು. ಹಾಗೆ ವ್ಯವಹಾರದಲ್ಲಿ ಅಂದುಕೊಳ್ಳುವದು ಅನಿವಾರ್ಯವೆನಿಸಿ ದರೂ ವಾಸ್ತವವಾಗಿ ತಾನು ಕರ್ತೃವಲ್ಲ, ಭೋಕ್ತೃವೂ ಅಲ್ಲ. ಈ ಭ್ರಮೆಗಳೆ ರಡೂ ನಮ್ಮ ಆತ್ಮನಲ್ಲಿ ಬಹುಕಾಲದಿಂದ ಇದ್ದುಕೊಂಡುಬಿಟ್ಟಿವೆ. ಗೀತೆಯು ಆ ಭ್ರಾಂತಿಯನ್ನು ಹೋಗಲಾಡಿಸಲೆಂದೇ ಅರ್ಜುನನಿಗೆ ಆತ್ಮಜ್ಞಾನೋಪದೇಶ ವನ್ನೂ ಮಾಡಿ ಕರ್ತೃವೂ ಕಾರಯಿತೃವೂ ತಾನಲ್ಲ, ನಾರಾಯಣನೇ- ಎಂದು ತಿಳಿಸಿ ಕೊಟ್ಟಿದೆ. ಹಾಗಾದರೆ ಮಾತ್ರ ಭೂತಪ್ರಕೃತಿಮೋಕ್ಷವು ಸಾಧ್ಯವಾಗಲಿದೆ.

ಹಾಗಾದರೆ ಜೀವಾತ್ಮನ ಹೊಣೆಗಾರಿಕೆಯೇನೂ ಇಲ್ಲವೆ? ಪ್ರಕೃತಿಯೇ ಎಲ್ಲವನ್ನೂ ಮಾಡುವದಾದರೆ, ಆತ್ಮನಿಗೆ ಕರ್ಮಸಂಬಂಧವೇನೂ ಇಲ್ಲವಾದರೆ ಪಾಪ, ನರಕಗಳೆಲ್ಲ ಯಾರಿಗೆ? ಶಾಸ್ತ್ರೋಪದೇಶವೂ ವ್ಯರ್ಥವಾದೀತಲ್ಲವೆ? ಎಂದು ಕೇಳಬಹುದು. ಇದಕ್ಕೆ ಗೀತೆಯಲ್ಲಿರುವ ಉತ್ತರವೇನೆಂದರೆ : ಪ್ರಕೃತಿಯು ತಾನೊಂದೇ ಆಗಲಿ, ಜೀವಾತ್ಮನೂ ತಾನೊಬ್ಬನೇ ಆಗಲಿ- ಏನನ್ನೂ ಮಾಡ ಲಾರರು. ಏಕೆಂದರೆ ಪ್ರಕೃತಿಯು ಜಡ. ಜೀವನು ಅಶರೀರನು. ಈ ಅರ್ಥದಲ್ಲಿ ಕರ್ಮಗಳು ಯಾರಿಗೂ ಹೊಂದುವದಿಲ್ಲ. ಆದ್ದರಿಂದ ಜೀವನು ತಪ್ಪುತಿಳಿವಳಿಕೆ ಯಿಂದ ಪ್ರಕೃತಿಯು ತಾನೆಂದು ಭಾವಿಸಿದ್ದೇ ಕರ್ಮಪ್ರವೃತ್ತಿಗೂ ಸರ್ವಾನರ್ಥಕ್ಕೂ ಕಾರಣವಾಯಿತು. ಈ ಭಾವನೆಯಿರುವವರೆಗೂ ಜೀವನಿಗೆ ಕರ್ತೃತ್ವಭೋಕ್ತೃ ತ್ವಗಳಿದ್ದೇ ಇವೆ. ಆ ಸ್ಥಿತಿಯಲ್ಲೇ ಬಂಧಮೋಕ್ಷಗಳೂ ಶಾಸ್ತ್ರೋಪದೇಶಾದಿಗಳೂ ಸಾರ್ಥಕವಾಗುತ್ತವೆ. ಆದ್ದರಿಂದ ಪ್ರತಿಯೊಬ್ಬ ಅಜ್ಞಜೀವನೂ ತನ್ನತನ್ನ ಅವಿದ್ಯೆ ಯನ್ನು ಸಮೂಲವಾಗಿ ಕಳೆದುಕೊಳ್ಳುವವರೆಗೂ ತನ್ನ ಕರ್ತೃಸ್ವಾತಂತ್ರ್ಯವನ್ನು ಉಪೇಕ್ಷಿಸಿಮಾಡದೆ ಕರ್ಮಬಂಧಪ್ರಹಾಣಕ್ಕಾಗಿ ಯಜ್ಞರೂಪವಾದ ಕರ್ಮಗಳನ್ನು ನಾರಾಯಣಪ್ರೀತ್ಯರ್ಥವಾಗಿ ಮಾಡುತ್ತಿರಲೇಬೇಕು. ನಾರಾಯಣನ ಪ್ರಸಾದದಿಂದ ಚಿತ್ತಶುದ್ಧಿಯು ದೊರೆತು ಜ್ಞಾನಪ್ರಾಪ್ತಿಯ ಮೂಲಕ ಮುಕ್ತನಾದಲ್ಲಿ ಯಾವ ಕರ್ಮಗಳನ್ನೂ ಮಾಡಬೇಕಾಗಿಲ್ಲ. ಅದನ್ನೇ ಭಗವಂತನು 'ಸರ್ವಂ ಕರ್ಮಾ- ಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ' ಎಂದು ತಿಳಿಸಿರುತ್ತಾನೆ. ಇದೇ ಗೀತೋಕ್ತವಾದ ಸಾಧನರಹಸ್ಯವು.

—— ——

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ : (A) M.P.N. 759 ಡಿ. ಜಿ. ಗಂಗೊಳ್ಳಿಯವರು, ಸಿಕಂದರಾಬಾದ್; 760 ಶಂಕರಾಚಾರಿಯವರು, ಬೆಂಗಳೂರು; 761 ಲಕ್ಷ್ಮೀದೇವಮ್ಮನವರು, ಬೆಂಗಳೂರು; 762 ಕೆ. ಎನ್. ಪ್ರಭುರವರು, ಬೆಂಗಳೂರು; 763 ಬಿ. ರಾಮಸ್ವಾಮಿಯವರು, ಚಿಕ್ಕಮಗಳೂರು; 764 ಡಾ॥ ಟಿ. ಸುಬ್ಬರಾಯರು, ದಾವಣಗೆರೆ– ಈ ಮಹಾಶಯಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ನೀಡಿದ್ದಾರೆ. (B)MPO. No. 305 ಎ. ಆರ್. ನಾಗರಾಜರವರು, ಬೆಂಗಳೂರು; 478 ಶ್ರೀಮತಿ ಎ. ರಾಮಸ್ವಾಮಯ್ಯನವರು, ಕಾರ್ಗಲ್ ; 407 ಜೆ. ಎಂ. ಸಾವಿತ್ರಮ್ಮನವರು, ಝಂಬೂರು; 108 ಸರೋಜಮ್ಮನಾರಾಯಣಿಯವರು, ಬೆಂಗಳೂರು; 325 ಅಶ್ವತ್ಥಮ್ಮನವರು, ಬೆಂಗಳೂರು; 126 ಡಿ.ಬಿ. ಗಂಗೊಳ್ಳಿಯವರು, ಬೆಂಗಳೂರು 75 ಪಿ. ವೆಂಕಟರಾಮಯ್ಯಶೆಟ್ಟರು, ಬೆಂಗಳೂರು; 352 ಸಿ. ಎನ್. ಗಂಗಾಧರ ಮೂರ್ತಿಗಳು, ಬೆಂಗಳೂರು; 489 ಕೆ.ಎಲ್. ಕೃಷ್ಣಜೋಯಿಸರು, ಬೆಂಗಳೂರು; 153 ಡಾ॥ ಪಿ. ಎಸ್. ಹುಯಿಲ್‌ಗೋಳ್‌ರವರು, ಹುಬ್ಬಳ್ಳಿ ; 74 ಶ್ರೀಮತಿ ಅನಸೂಯಾಬಾಯಿ ವೆಂಕಟರಮಣಭಟ್ ಕುಮಟಾ– ಈ ಮಹಾಶಯರುಗಳು ಹಿಂದೆ ಕೊಟ್ಟಿದ್ದ ಹಣದ ಜೊತೆಗೆ ೫೧ ರೂ. ಗಳನ್ನು ನೀಡಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ.

1983 ನೆಯ ಡಿಸೆಂಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :–

**ಗ್ರಂಥಪ್ರಕಟನ ನಿಧಿಗೆ:** ಶ್ರೀಮತಿ ಲೀಲಾವತಮ್ಮನವರು, ಶಿವಮೊಗ್ಗ ರೂ ೨೨೫; ಮೀನಾಕುಮಾರಿಯವರು, ಶಿವಮೊಗ್ಗ ರೂ ೧೦೦; ಚಿನ್ಮಯಮಿಷನ್ ಅಧ್ಯಯನವೃತ್ತ, ಶಿವಮೊಗ್ಗ ರೂ ೨೫೧; ಒಟ್ಟು ರೂ ೫೭೬;

**ಅನುಷ್ಠಾನಖಾತೆಗೆ:** ಶ್ರೀಗಳಾದ : ಎಂ. ಹನುಮಂತರಾವ್, ಆದವಾನಿ ರೂ ೧೦; ಡಿ.ಹೆಚ್. ಪುಂಡಲೀಕರಾಯರು, ಬೆಂಗಳೂರು ರೂ ೫೦; ಶ್ಯಾ॥ಕೃಷ್ಣಪ್ಪನವರು, ಅಣತಿ ರೂ ೧೦; **ವಿಶೇಷಸಂದರ್ಭದಲ್ಲಿ :** (ಶ್ರೀ ಜ್ಞಾನಾನಂದೇಂದ್ರಸರಸ್ವತೀಸ್ವಾಮಿಗಳ ಆರಾಧನೆಗೆ) ಶ್ರೀಮತಿ ಎ. ಭಾಗೀರಥಮ್ಮನವರು, ಹೊ.ನ.ಪುರ ರೂ ೨೫೧; ಎ. ಎಸ್. ನಾಗಪ್ಪನವರು, ತಿಪಟೂರು ರೂ ೧೦೦; ಅಂಬುಜಮ್ಮನವರು, ಭದ್ರಾವತಿ ರೂ ೨೫; ಕೆ. ಎಸ್. ಶ್ರೀಕಂಠಯ್ಯನವರು, ಮೈಸೂರು ರೂ ೧೫; ಮಳಲಿ ರಾಮಭಟ್ಟರು, ತರೀಕೆರೆ ರೂ ೧೦; ಶ್ರೀನಿವಾಸಮೂರ್ತಿಗಳು, ಹೊಳೆನರಸೀಪುರ, ರೂ ೧೦; ಶಿವರಾಮಯ್ಯನವರು, ರೂ ೫; ಮಳಲಿ ನರಸಿಂಹಭಟ್ಟರು ರೂ ೫; ಎ. ಚಂದ್ರಶೇಖರರವರು ರೂ ೨; ಒಟ್ಟು ರೂ ೪೯೮ ಮಾತ್ರ.

**ಪೂಜಾಮಂದಿರಕ್ಕೆ:** ಯಾದಾಳಂ ವಂಶೀಕರು, ಬೆಂಗಳೂರು, ರೂ ೧೫;

**ಗುರುಮಂದಿರಖಾತೆಗೆ:** ಯಾದಾಳಂ ಮಂಶೀಕರು, ಬೆಂಗಳೂರು ರೂ ೧೦;

**ಸಂನ್ಯಾಸಿಗಳ ಸತ್ಕಾರಖಾತೆಗೆ:** ಶ್ರೀಮತಿ ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ ರೂ ೨೦; ವಿಶಾಲಾಕ್ಷಮ್ಮನವರು, ಹೊಳೆನರಸೀಪುರ ರೂ ೫; ಎ. ಚಂದ್ರಶೇಖರ, ಹೊಳೆನರಸೀಪುರ ರೂ ೫; ಒಟ್ಟು ರೂ ೩೦;

**ವಿಶೇಷ ಧನಸಹಾಯ:** ಬೆಂಗಳೂರು ನಗರದ ಶ್ರೀನಿವಾಸಬಡಾವಣೆಯಲ್ಲಿ ರುವ ಶ್ರೀ. ಟಿ. ಎನ್. ಚಂದ್ರಶೇಖರ-ರವರು ಈ ಕೆಳಗೆ ಕಂಡಂತೆ ಸಹಾಯದ್ರವ್ಯ ವನ್ನು ನೀಡಿದ್ದಾರೆ:- (೧) ಗ್ರಂಥಪ್ರಕಟನೆಗೆ ರೂ ೨೫; (೨) ಗುರುಮಂದಿರಕ್ಕೆ ರೂ ೨೫; (೩) ಸಂನ್ಯಾಸಿಗಳ ಸತ್ಕಾರಖಾತೆಗೆ ರೂ ೧೦೧; (೪) ಶ್ರೀಶ್ರೀಗಳವರ ಆರಾಧನಾನಿಧಿಗೆ ರೂ ೨೫; (೫) ಪೂಜಾಮಂದಿರ ನಿಧಿಗೆ ರೂ ೨೫; (೬) ಕಟ್ಟಡದ ನಿಧಿಗೆ ರೂ ೨೫; (೭) ಅನುಷ್ಠಾನನಿಧಿಗೆ ರೂ ೫೦ ; (೮) ವಿಶೇಷಸಂದರ್ಭಗಳಿಗೆ ರೂ. ೨೫ ; ಒಟ್ಟು ರೂ. ೩೦೧ ; ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುವೆವು.

---

## ಅಧ್ಯಾತ್ಮವಿದ್ಯಾನಿಲಯ

ಭಗವದನುಗ್ರಹದಿಂದಲೂ ಸದ್ಗುರುಗಳ ಕೃಪಾಶೀರ್ವಾದಗಳ ಬಲದಿಂದಲೂ ಕಳೆದ ಶರನ್ನವರಾತ್ರಿ (1983 ನೇ ಅಕ್ಟೋಬರ್) ಯಿಂದ ಹೊಳೆನರಸೀಪುರದಲ್ಲಿ ಅಧ್ಯಾತ್ಮವಿದ್ಯಾನಿಲಯವು ಮತ್ತೆ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿದೆ. ಇಂಗ್ಲಿಷ್ ಎಂ.ಎ. ಪದವೀಧರರೂ ಬ್ರಹ್ಮಚಾರಿಗಳೂ ಆದ ಶ್ರೀ॥ **ಬಿ.ಎಸ್. ಕೃಷ್ಣ ಮೂರ್ತಿ** ಎಂಬ ವಿದ್ಯಾರ್ಥಿಮಹನೀಯರು ವೇದಾಂತವ್ಯಾಸಂಗಕ್ಕಾಗಿ ಬಂದಿದ್ದಾರೆ. ಅವರೊಡನೆ ಊರಿನ ಕೆಲವು ಜಿಜ್ಞಾಸುಗಳೂ ಸಹಕರಿಸುತ್ತಿದ್ದಾರೆ. ಬೆಳಗ್ಗೆ **ಕಠೋಪನಿಷದ್ಭಾಷ್ಯ,** ಸಂಜೆ **ಭಗವದ್ಗೀತಾಭಾಷ್ಯ**ಪಾಠಗಳು ಆರಂಭವಾಗಿದ್ದು ಕ್ರಮವಾಗಿ ನಡೆಯುತ್ತಿವೆ. ಪಂಡಿತರು ಸ್ಥಳದಲ್ಲಿರುವಾಗಲೆಲ್ಲ ಭಾಷ್ಯಪಾಠಗಳನ್ನು ನಡೆಸುತ್ತಾರೆ. ಅವರ ಪ್ರವಾಸಕಾಲದಲ್ಲಿ ವಿದ್ಯಾರ್ಥಿಯೇ ಉಳಿದವರೊಡಗೂಡಿ ವ್ಯಾಸಂಗವನ್ನು ಮುಂದುವರೆಸುತ್ತಿದ್ದಾರೆ. ಜೊತೆಗೆ ವೇದ, ಸ್ತೋತ್ರಪಾಠಗಳ ಪಠನ, ಭಜನೆ, ಇತ್ಯಾದಿಗಳನ್ನೂ ಮಾಡುತ್ತಾರೆ. ಇವರಿಗೆ ಉಚಿತವಾಗಿ ವಸತಿ, ಭೋಜನಾದಿಸೌಕರ್ಯಗಳನ್ನೂ ಯಥೋಚಿತ ವಿದ್ಯಾರ್ಥಿವೇತನವನ್ನೂ ಒದಗಿಸ ಲಾಗಿದೆ.

ಅಧ್ಯಾತ್ಮವಿದ್ಯಾಸಕ್ತರಾದ ಉದಾರಮನಸ್ಸಿನ ಮಹನೀಯರುಗಳು ಈ ಸಂದರ್ಭದಲ್ಲಿ “ ವಿದ್ಯಾಲಯನಿಧಿಗೆ ” ಒದಗಿಸಬಹುದಾದ ಧನಸಹಾಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗುವದು. (ಮಾಹೆಯಾನ ೩೦೦ ರೂ.ಗಳ ಖರ್ಚಿದೆ).

---

# ಅದ್ವೈತವೇದಾಂತಕ್ಕೆ ಫಲಪ್ರದ ಕೊಡುಗೆ

**(ಕನ್ನಡಪ್ರಭ-22-1-1984)**

**"ಕನ್ನಡಪ್ರಭ"** ದಿನಪತ್ರಿಕೆಯ 'ಪುಸ್ತಕವಿಮರ್ಶೆ' ವಿಭಾಗದಲ್ಲಿ ಈಚೆಗೆ ಕಾರ್ಯಾಲಯದಿಂದ ಪ್ರಕಟವಾಗಿರುವ ಎರಡು ಮಹಾಗ್ರಂಥಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಅದು ಹೀಗಿದೆ :-

೧. **ಪರಮಾರ್ಥಚಿಂತಾಮಣಿ :** (ಬೆಲೆ ರೂ. ೧೫) ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಸಚ್ಚಿದಾನಂದದರ್ಶನವನ್ನು ಶ್ರೀ ಸ್ವಾಮಿಗಳು ಇರವಿನ ಪರಮಾರ್ಥ, ಅರಿವಿನ ಪರಮಾರ್ಥ, ಸುಖದ ಪರಮಾರ್ಥ- ಎಂದು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಿಕೊಂಡು ಓದುಗರಿಗೆ ಸುಲಭವಾದ ರೀತಿಯಲ್ಲಿ ತಿಳಿಯುವಂತೆ ಪ್ರತಿಪಾದಿಸಿರುತ್ತಾರೆ. ಪಾಶ್ಚಾತ್ಯರ ಸಂಸರ್ಗದಿಂದ ತಲೆಯೆತ್ತಿರುವ ಪೂರ್ವಪಕ್ಷಗಳಿಗೂ ಇಲ್ಲಿ ಉತ್ತರವಿದೆ. ಇಡಿಯ ಗ್ರಂಥವು ಸ್ವತಂತ್ರಧಾಟಿಯನ್ನ ವಲಂಬಿಸಿದ್ದರೂ ತತ್ತ್ವದ ಮುಖ್ಯ ಪ್ರಮೇಯಗಳನ್ನು ಬಹಳ ತಿಳಿಯಾಗಿ ವೇದಾಂತದರ್ಶನಕ್ಕೆ ಆಕ್ಷೇಪಬರದಂತೆ ಬರೆಯುತ್ತ ಹೋಗಿರುವದು ಶ್ಲಾಘನೀಯವೇ ಸರಿ. ಶ್ರೀ ಸ್ವಾಮಿಗಳ ತರ್ಕಬದ್ಧಶೈಲಿ, ನೇರವಾದ ಅಪ್ರತಿಹತ ನಿರೂಪಣೆ, ದುರವಗಾಹವಲ್ಲದ ಭಾಷೆಯಿಂದಾಗಿ ಗ್ರಂಥವು ಹೆಚ್ಚು ಮನನೀಯವಾಗುತ್ತದೆ. ದ್ವೈತಾದ್ವೈತವಿಶಿಷ್ಟಾದ್ವೈತಾದಿಸಿದ್ಧಾಂತಗಳಿದ್ದರೂ ಮುಖ್ಯಪ್ರಮೇಯಗಳ ಪರಮಾರ್ಥವನ್ನೇ ಇಲ್ಲಿ ಮೂಲವಾಗಿಟ್ಟುಕೊಂಡಿರುವದರಿಂದ ಈ ಗ್ರಂಥವು ಎಲ್ಲಾ ತತ್ತ್ವಜಿಜ್ಞಾಸುಗಳಿಗೂ ಅಪೇಕ್ಷಣೀಯವೆನಿಸುತ್ತದೆ. ಸ್ವಾಮಿಗಳ ಅಪಾರವಾದ ತತ್ತ್ವಾನುಸಂಧಾನ, ಬೌದ್ಧಿಕಪ್ರತಿಭಾಸಾಮರ್ಥ್ಯ, ವಿಚಾರಾನುಭವಗಳು ಪುಸ್ತಕದ ಹೆಜ್ಜೆಹೆಜ್ಜೆಗೂ ತಟ್ಟುತ್ತ ಹೋಗುತ್ತದೆ. ತತ್ತ್ವಜಿಜ್ಞಾಸುಗಳು ಒಮ್ಮೆ ಖಂಡಿತವಾಗಿಯೂ ನೋಡಬೇಕಾದ ಗ್ರಂಥವಿದು.

೨. **ಉಪದೇಶಸಾಹಸ್ರೀ-ಗದ್ಯಭಾಗ :** (ಕನ್ನಡ ವಿವರಣೆ ಸಹಿತ) (ಬೆಲೆ ರೂ. ೧೦;) ಶ್ರೀಶಂಕರಾಚಾರ್ಯರ ಅನೇಕ ಗ್ರಂಥಗಳಲ್ಲೊಂದಾದ ಈ ಪುಸ್ತಕಕ್ಕೆ ಶ್ರೀ ಸ್ವಾಮಿಗಳು ಅರ್ಥ, ತಾತ್ಪರ್ಯ, ವಿವರಣೆಗಳನ್ನು ರಚಿಸಿದ್ದಾರೆ, ಅವೆಲ್ಲವೂ ಈ ಗ್ರಂಥದಲ್ಲಿ ಅಡಕವಾಗಿವೆ. ಇದು ಶ್ರೀಶಂಕರರ ಬೋಧೆಯನ್ನು ಕನ್ನಡದ ಮೂಲಕ ಗ್ರಹಿಸಿಕೊಳ್ಳುವದಕ್ಕೆ ತಕ್ಕ ಹಾಗೂ ಮುಖ್ಯಾಂಶಗಳನ್ನು ಮೆಲುಕುಹಾಕುವದಕ್ಕೆ ಚೊಕ್ಕ ಗ್ರಂಥ. ವಿವರಣೆಯನ್ನು ಸ್ವಂತರೀತಿಯಲ್ಲಿ ಸ್ವಾಮಿಗಳು ಮಾಡಿದ್ದಾರೆ. ಈ ಎರಡೂ ಗ್ರಂಥಗಳು ತತ್ತ್ವಬೋಧಕರಿಗೂ ಜಿಜ್ಞಾಸುಗಳಿಗೂ ಫಲಪ್ರದಕೊಡುಗೆಗಳೆಂದು ಧಾರಾಳವಾಗಿ ಹೇಳಬಹುದು.

ಗ್ರಂಥಗಳು ದೊರೆಯುವ ಸ್ಥಳ :

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.

೧–೩. ಶ್ರೀ ಮಹಾದೇವನಿಂತೆಂದನು : ರಾವಣನು ಮಹಾರಾಣಿಯಾದ ಮಂಡೋದರಿಗೆ ಪ್ರೀತಿಯಿಂದ ಈ ರೀತಿಯಾದ ಮಾತುಗಳನ್ನು ಹೇಳಿ ರಾಮನೊಡನೆ ಯುದ್ಧದಲ್ಲಿ ಕಾದಾಡುವದಕ್ಕಾಗಿ ಹೊರಟನು. ಅವನು ಭದ್ರವಾದ ರಥವನ್ನೇರಿದನು. ಅದು ಹದಿನಾರು ಚಕ್ರಗಳಿಂದಲೂ ವರೂಥ– ಕೂಬರಗಳಿಂದ ಕೂಡಿದ್ದಾಗಿದ್ದು ಭಯಂಕರವಾದ ಹಾಗೂ ಪಿಶಾಚಿಗಳಂತೆ ಮುಖಗಳುಳ್ಳ ಕತ್ತೆಗಳಿಂದ ಕಟ್ಟಲ್ಪಟ್ಟು ಸಕಲವಿಧವಾದ ಶಸ್ತ್ರಾಸ್ತ್ರಗಳಿಂದಲೂ ಸೌಕರ್ಯವಿಶೇಷಗಳಿಂದಲೂ ಸಜ್ಜಾಗಿತ್ತು. ಆಗ ಭಯಂಕರಾಕಾರನಾದ ರಾವಣನು ಘೋರರಾದ ರಾಕ್ಷಸರೊಡಗೂಡಿ ಕೂಡಲೆ ಹೊರಬಿದ್ದನು.

**ಆಯಾಂತಂ ರಾವಣಂ ದೃಷ್ಟ್ವಾ ಭೀಷಣಂ ರಣಕರ್ಕಶಮ್ ।**
**ಸಂತ್ರಸ್ತಾಭೂತ್ ತದಾ ಸೇನಾ ವಾನರೀ ರಾಮಪಾಲಿತಾ ॥೪॥**

**ಹನೂಮಾನಥ ಚೋತ್ಪ್ಲುತ್ಯ ರಾವಣಂ ಯೋದ್ಧುಮಾಯಯೌ ।**
**ಆಗತ್ಯ ಹನುಮಾನ್ ರಕ್ಷೋವಕ್ಷಸ್ಯತುಲವಿಕ್ರಮಃ ॥೫॥**
**ಮುಷ್ಟಿಬಂಧಂ ದೃಢಂ ಬಧ್ವಾ ತಾಡಯಾಮಾಸ ವೇಗತಃ ।**
**ತೇನ ಮುಷ್ಟಿಪ್ರಹಾರೇಣ ಜಾನುಭ್ಯಾಮಪತದ್ ರಥೇ ॥೬॥**

೪–೬. ಭಯಂಕರನೂ ರಣಕರ್ಕಶನೂ ಆದ ರಾವಣನು ಬರುತ್ತಿರುವದನ್ನು ಕಂಡು ರಾಮನಿಂದ ಕಾಪಾಡಲ್ಪಟ್ಟಿದ್ದ ವಾನರಸೈನ್ಯವು ಬೆದರಿಹೋಯಿತು. ಆಗ ಹನುಮಂತನು ನೆಗೆದವನಾಗಿ ರಾವಣನೊಡನೆ ಯುದ್ಧಕ್ಕೆ ಹೊರಟನು. ಮತ್ತು (ರಾವಣನ ಬಳಿಗೆ) ಬಂದು ಅತಿ ಪರಾಕ್ರಮಶಾಲಿಯಾದ ಆತನು ರಾಕ್ಷಸನ ಎದೆಗೆ ದೃಢವಾಗಿ ಮುಷ್ಟಿಯನ್ನು ಬಿಗಿದು ವೇಗದಿಂದ ಗುದ್ದಿದನು. ಆ ಮುಷ್ಟಿಯ ಹೊಡೆತದಿಂದ ಮುಂಗಾಲು ಚಾಚಿಕೊಂಡು ರಾವಣನು ರಥದಲ್ಲೇ ಬಿದ್ದನು.

**ಮೂರ್ಛಿತೋಽಥ ಮುಹೂರ್ತೇನ ರಾವಣಃ ಪುನರುತ್ಥಿತಃ ।**
**ಉವಾಚ ಚ ಹನೂಮಂತಂ ಶೂರೋಽಸಿ ಮಮ ಸಂಮತಃ ॥೭॥**
**ಹನೂಮಾನಾಹ ತಂ ಧಿಙ್ ಮಾಂ ಯಸ್ತ್ವಂ ಜೀವಸಿ ರಾವಣ ।**
**ತ್ವಂ ತಾವನ್ಮುಷ್ಟಿನಾ ವಕ್ಷೋ ಮಮ ತಾಡಯ ರಾವಣ ।**
**ಪಶ್ಚಾನ್ಮಯಾ ಹತಃ ಪ್ರಾಣಾನ್ ಮೋಕ್ಷ್ಯಸೇ ನಾತ್ರ ಸಂಶಯಃ ॥೮॥**

೭–೮. ಅನಂತರ ಮುಹೂರ್ತಕಾಲ ಮೂರ್ಛೆಹೊಂದಿದ ರಾವಣನು ಮತ್ತೆ ಮೇಲೆದ್ದವನಾಗಿ ಹನುಮಂತನನ್ನು ಕುರಿತು ಹೀಗೆಂದನು : 'ನೀನು ಶೂರನೇ ಸರಿ, ನನ್ನ ಮೆಚ್ಚುಗೆಗೆ ಪಾತ್ರನಾಗಿರುವೆ.' ಆಗ ಹನುಮಂತನಿಂತೆಂದನು : 'ಅಯ್ಯೋ ನನಗೆ ಧಿಕ್ಕಾರವಿರಲಿ! ಎಲೈ ರಾವಣನೆ, ನಾನು (ಗುದ್ದಿದ

ಮೇಲೂ) ಇನ್ನೂ ನೀನು ಬದುಕಿಯೇ ಇರುವೆಯಲ್ಲ? ಇರಲಿ; ರಾವಣನೆ, ನೀನಾದರೋ ಈಗ ನನ್ನ ಎದೆಗೆ ಗುದ್ದುವವನಾಗು; ಅನಂತರ ನಾನು ನಿನಗೆ ಗುದ್ದಲಾಗಿ ಕೆಡವಲ್ಪಟ್ಟವನಾಗಿ ಪ್ರಾಣಗಳನ್ನು ಕಳೆದುಕೊಳ್ಳುವೆ ; ಇದರಲ್ಲಿ ಸಂಶಯವಿಲ್ಲ.' (ಎಂದನು).

**ತಥೇತಿ ಮುಷ್ಟಿನಾ ವಕ್ಷೋ ರಾವಣೇನಾಪಿ ತಾಡಿತಃ |**
**ವಿಘೂರ್ಣಮಾನನಯನಃ ಕಿಂಚಿತ್ ಕಶ್ಮಲಮಾಯಯೌ ||೯||**
**ಸಂಜ್ಞಾಮವಾಪ್ಯ ಕಪಿರಾಟ್ ರಾವಣಂ ಹಂತುಮುದ್ಯತಃ |**
**ತತೋಽನ್ಯತ್ರ ಗತೋ ಭೀತ್ಯಾ ರಾವಣೋ ರಾಕ್ಷಸಾಧಿಪಃ ||೧೦||**

೯-೧೦. ಹಾಗೆಯೇ ಆಗಲಿ-ಎಂದು ರಾವಣನು ಕೂಡ ಮುಷ್ಟಿಯಿಂದ ಹನುಮಂತನ ಎದೆಯಲ್ಲಿ ಗುದ್ದಿದನು. ಕಣ್ಣು ಕತ್ತಲಾಗಿ ತಲೆ ತಿರುಗಿದ ಹನುಮಂತನು ಸ್ವಲ್ಪಮಟ್ಟಿಗೆ ವಿಷಾದವನ್ನು ಹೊಂದಿದನು. ಅನಂತರ ಚೇತರಿಸಿಕೊಂಡವನಾಗಿ ಆ ಕಪಿಶ್ರೇಷ್ಠನು ರಾವಣನನ್ನು ಕೊಲ್ಲಲು ಹೊರಟನು. ಆ ವೇಳೆಗೆ ರಾಕ್ಷಸಾಧಿಪನಾದ ರಾವಣನು ಭಯದಿಂದ ಬೇರೊಂದು ಕಡೆಗೆ ಹೊರಟುಹೋದನು.

**ಹನೂಮಾನಂಗದಶ್ಚೈವ ನಲೋ ನೀಲಸ್ತಥೈವ ಚ |**
**ಚತ್ವಾರಃ ಸಮವೇತಾಗ್ರೇ ದೃಷ್ಟ್ವಾ ರಾಕ್ಷಸಪುಂಗವಾನ್ ||೧೧||**
**ಅಗ್ನಿವರ್ಣಂ ತಥಾ ಸಪ್ತರೋಮಾಣಂ ಖಡ್ಗರೋಮಕಮ್ |**
**ತಥಾ ವೃಶ್ಚಿಕರೋಮಾಣಂ ನಿರ್ಜಘ್ನುಃ ಕ್ರಮಶೋಽಸುರಾನ್ ||೧೨||**
**ಚತ್ವಾರಶ್ಚತುರೋ ಹತ್ವಾ ರಾಕ್ಷಸಾನ್ ಭೀಮವಿಕ್ರಮಾನ್ |**
**ಸಿಂಹನಾದಂ ಪೃಥಕ್ ಕೃತ್ವಾ ರಾಮಪಾರ್ಶ್ವಮುಪಾಗತಾಃ ||೧೩||**

೧೧-೧೩. ಹನುಮಂತ, ಅಂಗದ, ನಳ, ನೀಲ-ಈ ನಾಲ್ವರು ಕೂಡಿ ಮುಂದಾಳುಗಳಾಗಿ ಹೊರಟು ರಾಕ್ಷಸರನ್ನು ಕಂಡರು. ಅಗ್ನಿವರ್ಣ, ಸಪ್ತರೋಮ, ಖಡ್ಗರೋಮ, ವೃಶ್ಚಿಕರೋಮ-ಎಂಬ ಹೆಸರಿನ ರಾಕ್ಷಸರನ್ನು ಕ್ರಮವಾಗಿ ಕೊಂದರು. ಈ ನಾಲ್ವರು ಭಯಂಕರಪರಾಕ್ರಮಿಗಳಾದ ನಾಲ್ವರು ರಾಕ್ಷಸರನ್ನು ಕೊಂದು ಬೇರೆಬೇರೆಯಾಗಿ ಸಿಂಹನಾದಮಾಡುತ್ತಾ ಶ್ರೀರಾಮನ ಸಮೀಪಕ್ಕೆ ಬಂದರು.

**ತತಃ ಕ್ರುದ್ಧೋ ದಶಗ್ರೀವಃ ಸಂದಶ್ಯ ದಶನಚ್ಛದಮ್ |**
**ವಿವೃತ್ಯ ನಯನೇ ಕ್ರೂರೋ ರಾಮಮೇವಾನ್ವಧಾವತ ||೧೪||**
**ದಶಗ್ರೀವೋ ರಥಸ್ಥಸ್ತು ರಾಮಂ ವಜ್ರೋಪಮೈಃ ಶರೈಃ |**
**ಆಜಘಾನ ಮಹಾಘೋರೈರ್ಧಾರಾಭಿರಿವ ತೋಯದಃ ||೧೫||**
**ರಾಮಸ್ಯ ಪುರತಃ ಸರ್ವಾನ್ ವಾನರಾನಪಿ ವಿವ್ಯಥೇ |**

೧೪-೧೫. ಅನಂತರ ಕುಪಿತನಾದ ರಾವಣನು ಹಲ್ಲುಗಳನ್ನು ಕಡಿಯುತ್ತಾ ಕಣ್ಣುಗಳನ್ನು ಅಗಲವಾಗಿ ತೆರೆದುಕೊಂಡು ರಾಮನನ್ನೇ ಕುರಿತು ನುಗ್ಗಿದನು. ಆ ರಥದಲ್ಲಿದ್ದ ದಶಗ್ರೀವನು ವಜ್ರಕ್ಕೆ ಸಮಾನವಾದ ಮಹಾಘೋರವಾದ ಬಾಣಗಳಿಂದ- ಮೋಡವು ತನ್ನ ಜಲಧಾರೆಗಳನ್ನು ಸುರಿಸುವಂತೆ ರಾಮನ ಮುಂದೆಯೇ ಎಲ್ಲಾ ಕಪಿಗಳನ್ನೂ ಪೀಡಿಸಿದನು.

**ತತಃ ಪಾವಕಸಂಕಾಶೈಃ ಶರೈಃ ಕಾಂಚನಭೂಷಣೈಃ ।**
**ಅಭ್ಯವರ್ಷದ್ ರಣೇ ರಾಮೋ ದಶಗ್ರೀವಂ ಸಮಾಹಿತಃ ॥೧೬॥**
**ರಥಸ್ಥಂ ರಾವಣಂ ದೃಷ್ಟ್ವಾ ಭೂಮಿಷ್ಠಂ ರಘುನಂದನಮ್ ।**
**ಆಹೂಯ ಮಾತಲಿಂ ಶಕ್ರೋ ವಚನಂ ಚೇದಮಬ್ರವೀತ್ ॥೧೭॥**
**ರಥೇನ ಮಮ ಭೂಮಿಷ್ಠಂ ಶೀಘ್ರಂ ಯಾಹಿ ರಘೂತ್ತಮಮ್ ।**
**ತ್ವರಿತಂ ಭೂತಲಂ ಗತ್ವಾ ಕುರು ಕಾರ್ಯಂ ಮಮಾನಘ ॥೧೮॥**

೧೬-೧೮. ಅನಂತರ ಬೆಂಕಿಯಂತಿರುವ ಸುವರ್ಣಾಲಂಕೃತವಾದ ಬಾಣಗಳಿಂದ ರಾಮನು ಯುದ್ಧದಲ್ಲಿ ರಾವಣನ ಮೇಲೆ ಧಾಳಿಮಾಡಿದನು. ಆಗ ರಾವಣನು ರಥದಲ್ಲಿರುವದನ್ನೂ ರಾಮನು ನೆಲದಮೇಲಿರುವದನ್ನೂ ನೋಡಿ ದೇವೇಂದ್ರನು ಮಾತಲಿಯನ್ನು ಕರೆದು ಈ ಮಾತನ್ನು ಹೇಳಿದನು. 'ಎಲೈ ಪಾಪರಹಿತನೆ, ನನ್ನ ರಥದೊಡನೆ ನೀನು ಭೂಮಿಯಲ್ಲಿರುವ ರಘುಶ್ರೇಷ್ಠನಾದ (ರಾಮನನ್ನು) ಸೇರುವವನಾಗು. ಬೇಗನೆ ಭೂಲೋಕಕ್ಕೆ ಹೋಗಿ ಈ ಕಾರ್ಯವನ್ನು ಕೈಗೊಳ್ಳುವವನಾಗು.'

**ಏವಮುಕ್ತೋಽಥ ತಂ ನತ್ವಾ ಮಾತಲಿರ್ದೇವಸಾರಥಿಃ ।**
**ತತೋ ಹಯೈಶ್ಚ ಸಂಯೋಜ್ಯ ಹರಿತೈಃ ಸ್ಯಂದನೋತ್ತಮಮ್ ॥೧೯॥**
**ಸ್ವರ್ಗಾಜ್ಜಯಾರ್ಥಂ ರಾಮಸ್ಯ ಹ್ಯುಪಚಕ್ರಾಮ ಮಾತಲಿಃ ।**

೧೯. ಈ ರೀತಿಯಾಗಿ ಹೇಳಲ್ಪಟ್ಟ ಆ ದೇವಸಾರಥಿಯಾದ ಮಾತಲಿಯು ಅವನಿಗೆ ನಮಸ್ಕರಿಸಿ ಅನಂತರ ಹಸಿರುಬಣ್ಣದ ಕುದುರೆಗಳಿಂದ ರಥವನ್ನು ಹೂಡಿದವನಾಗಿ ಸ್ವರ್ಗಲೋಕದಿಂದ ಶ್ರೀರಾಮನ ಜಯಕ್ಕಾಗಿ ಹೊರಟನು.

**ಪ್ರಾಂಜಲಿರ್ದೇವರಾಜೇನ ಪ್ರೇಷಿತೋಽಸ್ಮಿ ರಘೂತ್ತಮ ।**
**ರಥೋಽಯಂ ದೇವರಾಜಸ್ಯ ವಿಜಯಾಯ ತವ ಪ್ರಭೋ ॥೨೦॥**
**ಪ್ರೇಷಿತಶ್ಚ ಮಹಾರಾಜ ಧನುರೈಂದ್ರಂ ಚ ಭೂಷಿತಮ್ ।**
**ಅಭೇದ್ಯಂ ಕವಚಂ ಖಡ್ಗಂ ದಿವ್ಯತೂಣೀಯುಗಂ ತಥಾ ॥೨೧॥**
**ಆರುಹ್ಯ ಚ ರಥಂ ರಾಮ ರಾವಣಂ ಜಹಿ ರಾಕ್ಷಸಮ್ ।**
**ಮಯಾ ಸಾರಥಿನಾ ದೇವ ವೃತ್ರಂ ದೇವಪತಿರ್ಯಥಾ ॥೨೨॥**

೨೦-೨೨. ಆತನು ಕೈಮುಗಿದುಕೊಂಡವನಾಗಿ- 'ರಘುಶ್ರೇಷ್ಠನೆ, ಈ ರಥವು ದೇವರಾಜನದು. ಪ್ರಭುವೆ, ನಿನ್ನ ವಿಜಯಕ್ಕಾಗಿ ಇಂದ್ರಧನುಸ್ಸು, ಅಭೇದ್ಯವಾದ ಕವಚ, ಕತ್ತಿ, ದಿವ್ಯವಾದ ಎರಡು ಬತ್ತಳಿಕೆಗಳು-ಇವುಗಳೊಡನೆ ಕಳುಹಿಸಲ್ಪಟ್ಟಿದೆ. ರಾಮನೆ, ರಥವನ್ನೇರಿ ರಾಕ್ಷಸನಾದ ರಾವಣನನ್ನು ಕೊಲ್ಲುವವನಾಗು. ಹೇಗೆ ದೇವೇಂದ್ರನು ವೃತ್ರಾಸುರನನ್ನು ಸಂಹರಿಸಿದನೋ ಹಾಗೆ-ಸಾರಥಿಯಾದ ನನ್ನೊಡಗೂಡಿ (ರಾವಣಸಂಹಾರವನ್ನು) ಮಾಡುವವನಾಗು.'

**ಇತ್ಯುಕ್ತಸ್ತಂ ಪರಿಕ್ರಮ್ಯ ನಮಸ್ಕೃತ್ಯ ರಥೋತ್ತಮಮ್ ।**
**ಆರುರೋಹ ರಥಂ ರಾಮೋ ಲೋಕಾನ್ ಲಕ್ಷ್ಮ್ಯಾ ನಿಯೋಜಯನ್ ॥**
**ತತೋಽಭವನ್ಮಹಾಯುದ್ಧಂ ಭೈರವಂ ರೋಮಹರ್ಷಣಮ್ ।**
**ಮಹಾತ್ಮನೋ ರಾಘವಸ್ಯ ರಾವಣಸ್ಯ ಚ ಧೀಮತಃ । ॥೨೪॥**
**ಆಗ್ನೇಯೇನ ಚ ಆಗ್ನೇಯಂ ದೈವಂ ದೈವೇನ ರಾಘವಃ ।**
**ಅಸ್ತ್ರಂ ರಾಕ್ಷಸರಾಜಸ್ಯ ಜಘಾನ ಪರಮಾಸ್ತ್ರವಿತ್ ॥೨೫॥**

೨೩-೨೫. ಹೀಗೆ ಹೇಳಲ್ಪಟ್ಟ ರಾಮನು ಆ ಶ್ರೇಷ್ಠವಾದ ರಥಕ್ಕೆ ನಮಸ್ಕರಿಸಿ ಜಗತ್ತಿಗೆಲ್ಲ ಕ್ಷೇಮವುಂಟುಮಾಡುವದಕ್ಕಾಗಿ ಆ ರಥವನ್ನೇರಿದನು. ಅನಂತರ ಭಯಂಕರವೂ ರೋಮಾಂಚವುಂಟುಮಾಡುವಂಥದೂ ಆದ, ಮಹಾತ್ಮನಾದ ರಾಮನ ಹಾಗೂ ಬುದ್ಧಿಶಾಲಿಯಾದ ರಾವಣನ ನಡುವಿನ ಮಹಾಯುದ್ಧವು ನಡೆಯಿತು. ಪರಮಾಸ್ತ್ರಜ್ಞನಾದ ರಾಮನು ತನ್ನ ಆಗ್ನೇಯಾಸ್ತ್ರದಿಂದ ರಾವಣನ ಆಗ್ನೇಯಾಸ್ತ್ರವನ್ನೂ ದೇವಾಸ್ತ್ರದಿಂದ ದೇವಾಸ್ತ್ರವನ್ನೂ ಹೊಡೆದನು.

**ತತಸ್ತು ಸಸೃಜೇ ಘೋರಂ ರಾಕ್ಷಸಂ ಚಾಸ್ತ್ರಮಸ್ತ್ರವಿತ್ ।**
**ಕ್ರೋಧೇನ ಮಹತಾವಿಷ್ಟೋ ರಾಮಸ್ಯೋಪರಿ ರಾವಣಃ ।೨೬॥**
**ರಾವಣಸ್ಯ ಧನುರ್ಮುಕ್ತಾಃ ಸರ್ಪಾ ಭೂತ್ವಾ ಮಹಾವಿಷಾಃ ।**
**ಶರಾಃ ಕಾಂಚನಪುಂಖಾಭಾ ರಾಘವಂ ಪರಿತೋಽಪತನ್ ॥೨೭॥**

೨೬-೨೭. ಅನಂತರ ಅಸ್ತ್ರಜ್ಞನಾದ ರಾವಣನು ಬಹಳವಾದ ಕೋಪದಿಂದ ಕೂಡಿದವನಾಗಿ ಭಯಂಕರವಾದ ರಾಕ್ಷಸಾಸ್ತ್ರವನ್ನು ರಾಮನಿಗೆ ಎದುರಾಗಿ ಸೃಷ್ಟಿಸಿದನು. ರಾವಣನ ಬಿಲ್ಲಿನಿಂದ ಹೊರಟ ಚಿನ್ನದ ಗರಿಗಳುಳ್ಳ ಕಾಂತಿಯುಕ್ತವಾದ ಬಾಣಗಳು ಮಹಾವಿಷವುಳ್ಳ ಹಾವುಗಳಾಗಿ ರಾಮನನ್ನು ಸುತ್ತುವರಿದು ಉದುರಿದವು.

ತೈಕ್ಷ್ಣೈಃ ಸರ್ಪವದನೈರ್ವಮದ್ಭಿರನಲಂ ಮುಖೈಃ ।
ದಿಶಶ್ಚ ವಿದಿಶಶ್ಚೈವ ವ್ಯಾಪ್ತಾಸ್ತತ್ರ ತದಾಽಭವನ್ ॥೨೮॥
ರಾಮಃ ಸರ್ಪಾನ್ ತತೋ ದೃಷ್ಟ್ವಾ ಸಮಂತಾತ್ ಪರಿಪೂರಿತಾನ್ ।
ಸೌಪರ್ಣಮಸ್ತ್ರಂ ತದ್ ಘೋರಂ ಪುರಃ ಪ್ರಾವರ್ತಯದ್ ರಣೇ ॥೨೯॥
ರಾಮೇಣ ಮುಕ್ತಾಸ್ತೇ ಬಾಣಾ ಭೂತ್ವಾ ಗರುಡರೂಪಿಣಃ ।
ಚಿಚ್ಛಿದುಃ ಸರ್ಪಬಾಣಾಂಸ್ತಾನ್ ಸಮಂತಾತ್ ಸರ್ಪಶತ್ರವಃ ॥೩೦॥

೨೮-೩೦. ಹಾವಿನ ಮುಖದ ಆ ಬಾಣಗಳಿಂದ ಹೊರಬಿದ್ದ ಬೆಂಕಿಯಿಂದ ಆಗ ದಿಕ್ಕುಗಳೂ ವಿದಿಕ್ಕುಗಳೂ ವ್ಯಾಪಿಸಲ್ಪಟ್ಟವು. ಆಗ ರಾಮನು ಸುತ್ತಲೂ ತುಂಬಿಹೋಗಿದ್ದ ಹಾವುಗಳನ್ನು ಕಂಡು ಭಯಂಕರವಾದ ಗರುಡಾಸ್ತ್ರವನ್ನು ಯುದ್ಧದಲ್ಲಿ ಮುಂದುವರೆದು ಪ್ರಯೋಗಮಾಡಿದನು. ರಾಮನಿಂದ ಬಿಡಲ್ಪಟ್ಟ ಸರ್ಪವೈರಿಗಳಾದ ಆ ಬಾಣಗಳು ಗರುಡನ ಆಕಾರವನ್ನು ಧರಿಸಿದವುಗಳಾಗಿ ಸುತ್ತಲೂ ತಮ್ಮ ಸ್ಪರ್ಶಮಾತ್ರದಿಂದ ಸರ್ಪಬಾಣಗಳನ್ನು ಕತ್ತರಿಸಿಹಾಕಿದವು.

ಅಸ್ತ್ರೇ ಪ್ರತಿಹತೇ ಯುದ್ಧೇ ರಾಮೇಣ ದಶಕಂಧರಃ ।
ಅಭ್ಯವರ್ಷತ್ ತತೋ ರಾಮಂ ಘೋರಾಭಿಃ ಶರವೃಷ್ಟಿಭಿಃ ॥೩೧॥
ತತಃ ಪುನಃ ಶರಾನೀಕೈಃ ರಾಮಮಕ್ಲಿಷ್ಟಕಾರಿಣಮ್ ।
ಅರ್ದಯಿತ್ವಾ ತು ಘೋರೇಣ ಮಾತಲಿಂ ಪ್ರತ್ಯವಿಧ್ಯತ ॥೩೨॥
ಪಾತಯಿತ್ವಾ ರಥೋಪಸ್ಥೇ ರಥಕೇತುಂ ಚ ಕಾಂಚನಮ್ ।
ಐಂದ್ರಾನಶ್ವಾನಭ್ಯಹನತ್ ರಾವಣಃ ಕ್ರೋಧಮೂರ್ಛಿತಃ ॥೩೩॥

೩೧-೩೩. ಯುದ್ಧದಲ್ಲಿ ರಾಮನಿಂದ ಅಸ್ತ್ರವು ಹಿಮ್ಮೆಟ್ಟಿಸಲ್ಪಡಲಾಗಿ ರಾವಣನು ಅನಂತರ ಭಯಂಕರವಾದ ಬಾಣದ ಮಳೆಯಿಂದ ರಾಮನನ್ನು ತುಂಬಿಬಿಟ್ಟನು. ಅನಂತರ ಮತ್ತೆ ಬಾಣಗಳ ಸಮೂಹಗಳಿಂದ ಪರಾಕ್ರಮಿಯಾದ ರಾಮನನ್ನು ಚೆನ್ನಾಗಿ ಹೊಡೆದು ಘೋರವಾದ ಬಾಣವೊಂದರಿಂದ ಮಾತಲಿಯನ್ನು ಪ್ರಹಾರಮಾಡಿದನು. ಮತ್ತು ಇಂದ್ರರಥದ ಚಿನ್ನದ ಧ್ವಜವನ್ನು ಸಹ ಕೆಡವಿದವನಾಗಿ ರಥದ ಮುಂದಿದ್ದ ಇಂದ್ರನ ಕುದುರೆಗಳನ್ನೂ ಕ್ರೋಧಾವಿಷ್ಟನಾದ ರಾವಣನು ಹೊಡೆದನು.

ವಿಷೇದುರ್ದೇವಗಂಧರ್ವಾಃ ಚಾರಣಾಃ ಪಿತರಸ್ತಥಾ ।
ಆರ್ತಾಕಾರಂ ಹರಿಂ ದೃಷ್ಟ್ವಾ ವ್ಯಥಿತಾಶ್ಚ ಮಹರ್ಷಯಃ ॥೩೪॥
ವ್ಯಥಿತಾ ವಾನರೇಂದ್ರಾಶ್ಚ ಬಭೂವುಃ ಸ ವಿಭೀಷಣಾಃ ।
ದಶಾಸ್ಯೋ ವಿಂಶತಿಭುಜಃ ಪ್ರಗೃಹೀತಶರಾಸನಃ ॥೩೫॥
ಪದೃಶೇ ರಾವಣಸ್ತತ್ರ ಮೈನಾಕ ಇವ ಪರ್ವತಃ ।

೩೪–೩೫. ದೇವತೆಗಳೂ ಗಂಧರ್ವರೂ ಚಾರಣರೂ ಪಿತೃಗಳೂ ಮಹರ್ಷಿಗಳೂ ಬಳಲಿಹೋದ ರಾಮನನ್ನು ಕಂಡು ದುಃಖಗೊಂಡರು. ವಿಭೀಷಣನೊಡಗೂಡಿದ ಕಪಿಗಳೂ ವಿಷಾದಹೊಂದಿದರು. ಹತ್ತುತಲೆಗಳಿಂದಲೂ ಇಪ್ಪತ್ತು ತೋಳುಗಳಿಂದಲೂ ಕೂಡಿದ ಹಾಗೂ ಕೈಗಳಲ್ಲಿ ಬಾಣಗಳನ್ನು ಹಿಡಿದಿರುವ ರಾವಣನು ಆ ರಣರಂಗದಲ್ಲಿ ಮೈನಾಕಪರ್ವತದಂತೆ ಕಂಡುಬಂದನು.

**ರಾಮಸ್ತು ಭ್ರುಕುಟಿಂ ಬದ್ಧ್ವಾ ಕ್ರೋಧಸಂರಕ್ತಲೋಚನಃ ।**
**ಕೋಪಂ ಚಕಾರ ಸದೃಶಂ ನಿರ್ದಹನ್ನಿವ ರಾಕ್ಷಸಮ್ ॥೩೬॥**
**ಧನುರಾದಾಯ ದೇವೇಂದ್ರಧನುರಾಕಾರಮದ್ಭುತಮ್ ।**
**ಗೃಹೀತ್ವಾ ಪಾಣಿನಾ ಬಾಣಂ ಕಾಲಾನಲಸಮಪ್ರಭಮ್ ॥೩೭॥**
**ನಿರ್ದಹನ್ನಿವ ಚಕ್ಷುರ್ಭ್ಯಾಂ ದದೃಶೇ ರಿಪುಮಂತಿಕೇ ।**
**ಪರಾಕ್ರಮಂ ದರ್ಶಯಿತುಂ ತೇಜಸಾ ಪ್ರಜ್ವಲನ್ನಿವ ॥೩೮॥**
**ಪ್ರಚಕ್ರಮೇ ಕಾಲರೂಪೀ ಸರ್ವಲೋಕಸ್ಯ ಪಶ್ಯತಃ ।**

೩೬–೩೮. ಶ್ರೀರಾಮನಾದರೊ, ಹುಬ್ಬುಗಂಟಿಕ್ಕಿದವನಾಗಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ರಾಕ್ಷಸನನ್ನು ಸುಟ್ಟುಬಿಡುವಂತೆ ಸಿಟ್ಟಾದನು. ದೇವೇಂದ್ರನ ಬಿಲ್ಲಿನಂತಿದ್ದ ಬೇರೊಂದು ಬಿಲ್ಲನ್ನು ತೆಗೆದುಕೊಂಡು ಪ್ರಲಯಾಗ್ನಿಯಂತಿದ್ದ ಬಾಣವನ್ನೂ ಕೈಯಲ್ಲಿ ಹಿಡಿದು ಕಣ್ಣುಗಳಿಂದ ಹತ್ತಿರವೇ ಇದ್ದ ಶತ್ರುವನ್ನು ದಹಿಸುವವನಂತೆ ನೋಡುತ್ತಾ, ತೇಜಸ್ಸಿನಿಂದ ಬಿಸಿಯೇರಿದವನಂತೆ –ಪರಾಕ್ರಮವನ್ನು ಪ್ರಕಟಿಸುವದಕ್ಕಾಗಿ–ಲೋಕದ ಜನರೆಲ್ಲರೂ ನೋಡುತ್ತಿರಲಾಗಿ ಕಾಲರೂಪಿಯಾದ ಆತನು ಮುನ್ನುಗ್ಗಿದನು.

**ವಿಕೃಷ್ಯ ಚಾಪಂ ರಾಮಸ್ತು ರಾವಣಂ ಪ್ರತಿವಿಧ್ಯ ಚ ।**
**ಹರ್ಷಯನ್ ವಾನರಾನೀಕಂ ಕಾಲಾಂತಕ ಇವಾಬಭೌ ॥೩೯॥**
**ಕ್ರುದ್ಧಂ ರಾಮಸ್ಯ ವದನಂ ದೃಷ್ಟ್ವಾ ಶತ್ರುಂ ಪ್ರಧಾವತಃ ।**
**ತತ್ರಸುಃ ಸರ್ವಭೂತಾನಿ ಚಚಾಲ ಚ ವಸುಂಧರಾ ॥೪೦॥**
**ರಾಮಂ ದೃಷ್ಟ್ವಾ ಮಹಾರೌದ್ರಮುತ್ಪಾತಾಂಶ್ಚ ಸುದಾರುಣಾನ್ ।**
**ತ್ರಸ್ತಾನಿ ಸರ್ವಭೂತಾನಿ ರಾವಣಂ ಚಾವಿಶದ್ಭಯಮ್ ॥೪೧॥**
**ವಿಮಾನಸ್ಥಾಃ ಸುರಗಣಾಃ ಸಿದ್ಧಗಂಧರ್ವಕಿನ್ನರಾಃ ।**
**ದದೃಶುಃ ಸುಮಹಾಯುದ್ಧಂ ಲೋಕಸಂವರ್ತಕೋಪಮಮ್ ॥೪೨॥**

೩೯–೪೨. ಶ್ರೀರಾಮನಾದರೊ, ಬಾಣವನ್ನೆಳೆದು ರಾವಣನನ್ನು ಪ್ರತಿಯಾಗಿ ಹೊಡೆದು ಕಪಿಸಮೂಹಕ್ಕೆಲ್ಲ ಆನಂದವನ್ನುಂಟುಮಾಡುತ್ತಾ

ಕಾಲಯಮನಂತೆ ಪ್ರಕಾಶಿಸುತ್ತಿದ್ದನು. ಕುಪಿತನಾದ ರಾಮನ ಮುಖವನ್ನು ನೋಡಿ, ಹಾಗೂ ಓಡುತ್ತಿರುವ ಶತ್ರುವನ್ನೂ ಕಂಡು ಎಲ್ಲಾ ಭೂತಗಳೂ ನಡುಗಿದವು. ಭೂಮಿಯು ಅಳ್ಳಾಡಿತು. ಮಹಾಭಯಂಕರನಾದ ರಾಮನನ್ನೂ ದಾರುಣವಾದ ಉತ್ಪಾತಗಳನ್ನೂ ಕಂಡು ಎಲ್ಲಾ ಪ್ರಾಣಿಗಳೂ ತತ್ತರಿಸಿದವು. ರಾವಣನಿಗೆ ಭಯವುಂಟಾಯಿತು. ವಿಮಾನದಲ್ಲಿ ಕುಳಿತಿದ್ದ ದೇವತೆಗಳೂ ಸಿದ್ಧಗಂಧರ್ವಕಿನ್ನರರೂ ಲೋಕಪ್ರಲಯಕ್ಕೆ ಸಮಾನವಾದ ಮಹಾಯುದ್ಧ ವನ್ನು ನೋಡುತ್ತಿದ್ದರು.

**ಐಂದ್ರಮಸ್ತ್ರಂ ಸಮಾದಾಯ ರಾವಣಸ್ಯ ಶಿರೋಽಚ್ಛಿನತ್ ।**
**ಮೂರ್ಧಾನೋ ರಾವಣಸ್ಯಾಥ ಬಹವೋ ರುಧಿರೋಕ್ಷಿತಾಃ** ॥೪೩॥

**ಗಗನಾತ್ ಪ್ರಪತಂತಿ ಸ್ಮ ತಾಲಾದಿವ ಫಲಾನಿ ಹಿ ।**
**ನ ದಿನಂ ನ ಚ ವೈ ರಾತ್ರಿಃ ನ ಸಂಧ್ಯಾ ನ ದಿಶೋಽಪಿ ವಾ** ॥೪೪॥
**ಪ್ರಕಾಶಂತೇ ನ ತದ್ರೂಪಂ ಧೃಶ್ಯತೇ ತತ್ರ ಸಂಗರೇ ।**

೪೩–೪೪. ಶ್ರೀರಾಮನು ಐಂದ್ರಾಸ್ತ್ರವನ್ನು ತೆಗೆದುಕೊಂಡು ರಾವಣನ ತಲೆಯನ್ನು ಕತ್ತರಿಸಿದನು. ರಾವಣನ ಅನೇಕ ತಲೆಗಳು ರಕ್ತದಿಂದ ತೋಯ್ದವುಗಳಾಗಿ–ತಾಳೆಯಮರದಿಂದ ಹಣ್ಣುಗಳು ಹೇಗೋ ಹಾಗೆ ಆಕಾಶ ದಿಂದ ಬೀಳುತ್ತಿದ್ದವು. ಹಗಲಾಗಲಿ, ರಾತ್ರಿಯಾಗಲಿ, ಸಂಧ್ಯಾಕಾಲವಾಗಲಿ, ದಿಕ್ಕುಗಳಾಗಲಿ ಆಯಾ ಪದಾರ್ಥಗಳ ರೂಪವಾಗಲಿ ಆ ಯುದ್ಧದಲ್ಲಿ ಕಾಣಿಸು ತ್ತಿರಲಿಲ್ಲ.

**ತತೋ ರಾಮೋ ಬಭೂವಾಥ ವಿಸ್ಮಯಾವಿಷ್ಟಮಾನಸಃ ।**
**ಶತಮೇಕೋತ್ತರಂ ಛಿನ್ನಂ ಶಿರಸಾಂ ಚೈಕವರ್ಚಸಾಮ್** ॥೪೫॥
**ನ ಚೈವ ರಾವಣಃ ಶಾಂತೋ ದೃಶ್ಯತೇ ಜೀವಿತಕ್ಷಯಾತ್ ।**
**ತತಃ ಸರ್ವಾಸ್ತ್ರವಿದ್ಧೀರಃ ಕೌಸಲ್ಯಾನಂದವರ್ಧನಃ** ॥೪೬॥
**ಅಸ್ತ್ರೈಶ್ಚ ಬಹುಭಿರ್ಯುಕ್ತಶ್ಚಿಂತಯಾಮಾಸ ರಾಘವಃ ।**
**ಯೈರ್ಯೈರ್ಬಾಣೈರ್ಹತಾ ದೈತ್ಯಾ ಮಹಾಸತ್ವಪರಾಕ್ರಮಾಃ** ॥೪೭॥
**ತ ಏತೇ ನಿಷ್ಫಲಂ ಯಾತಾ ರಾವಣಸ್ಯ ನಿಪಾತನೇ ।**

೪೫–೪೭. ರಾಮನು ಒಂದೇ ರೀತಿಯ ಕಾಂತಿಯುಳ್ಳ ನೂರೊಂದು ರಾವಣನ ತಲೆಗಳು ಕತ್ತರಿಸಲ್ಪಟ್ಟರೂ ರಾವಣನು ಪ್ರಾಣವನ್ನು ಕಳೆದು ಕೊಂಡು ನಿಶ್ಚೇಷ್ಟನಾಗಿ ಮಲಗಲಿಲ್ಲವೆಂದು ಆಶ್ಚರ್ಯದಿಂದ ಕೂಡಿದ ಮನಸ್ಸು ಳ್ಳವನಾದನು. ಅನಂತರ ಸರ್ವಾಸ್ತ್ರಗಳ ತಿಳಿವಳಿಕೆಯುಳ್ಳ ಧೀರನಾದ ಕೌಸಲ್ಯಾನಂದವರ್ಧನನಾದ ರಾಘವನು ಬಹಳವಾದ ಅಸ್ತ್ರಗಳಿಂದ ಕೂಡಿದ್ದವ

ನಾದರೂ ಹೀಗೆ ಚಿಂತಿಸಲಾರಂಭಿಸಿದನು. "ಮಹಾಬಲಪರಾಕ್ರಮಶಾಲಿಗಳಾದ ದೈತ್ಯರುಗಳು ಯಾವಯಾವ ಬಾಣಗಳಿಂದ ಕೊಲ್ಲಲ್ಪಟ್ಟರೋ ಆ ಬಾಣಗಳು ರಾವಣನನ್ನು ಕೆಡಹುವದರಲ್ಲಿ ವ್ಯರ್ಥವಾಗಿಬಿಟ್ಟವಲ್ಲ?" (ಎಂದು ಚಿಂತಿಸಿದನು).

**ಇತಿ ಚಿಂತಾಕುಲೇ ರಾಮೇ ಸಮೀಪಸ್ಥೋ ವಿಭೀಷಣಃ ।**
**ಉವಾಚ ರಾಘವಂ ವಾಕ್ಯಂ ಬ್ರಹ್ಮದತ್ತವರೋ ಹ್ಯಸೌ ॥೪೮॥**
**ವಿಚ್ಛಿನ್ನಾ ಬಾಹವೋಽಪ್ಯಸ್ಯ ವಿಚ್ಛಿನ್ನಾನಿ ಶಿರಾಂಸಿ ಚ ।**
**ಉತ್ಪತ್ಸ್ಯಂತಿ ಪುನಃ ಶೀಘ್ರಮಿತ್ಯಾಹ ಭಗವಾನಜಃ ॥೪೯॥**
**ನಾಭಿದೇಶೇಽಮೃತಂ ತಸ್ಯ ಕುಂಡಲಾಕಾರಸಂಸ್ಥಿತಮ್ ।**
**ತಚ್ಛೋಷಯಾನಲಾಸ್ತ್ರೇಣ ತಸ್ಯ ಮೃತ್ಯುಸ್ತತೋ ಭವೇತ್ ॥೫೦॥**

೪೮-೫೦. ಹೀಗೆ ರಾಮನು ಚಿಂತಾಕುಲನಾಗಿರಲಾಗಿ ಹತ್ತಿರದಲ್ಲಿದ್ದ ವಿಭೀಷಣನು ರಾಮನನ್ನು ಕುರಿತು ಹೀಗೆಂದನು: "ಪ್ರಭೋ, ಈತನು ಬ್ರಹ್ಮನಿಂದ ವರವನ್ನು ಪಡೆದಿದ್ದಾನೆ. ಅದರಂತೆ ಕತ್ತರಿಸಲ್ಪಟ್ಟ ಈತನ ತೋಳುಗಳೂ ತಲೆಗಳೂ ಮತ್ತೆ ಬೇಗನೆ ಹುಟ್ಟಲಿರುವವು; ಆದ್ದರಿಂದ ಇವನ ಹೊಕ್ಕಳುಪ್ರದೇಶದಲ್ಲಿ ದುಂಡಗೆ ಇರುವ ಅಮೃತವನ್ನು ಆಗ್ನೇಯಾಸ್ತ್ರದಿಂದ ಒಣಗಿಸಿಬಿಡುವವನಾಗು. ಅನಂತರ ಅವನಿಗೆ ಸಾವು ಸಂಭವಿಸಲಿದೆ" (ಎಂದನು).

**ವಿಭೀಷಣವಚಃ ಶ್ರುತ್ವಾ ರಾಮಃ ಶೀಘ್ರಪರಾಕ್ರಮಃ ।**
**ಪಾವಕಾಸ್ತ್ರೇಣ ಸಂಯೋಜ್ಯ ನಾಭಿಂ ವಿವ್ಯಾಧ ರಕ್ಷಸಃ ॥೫೧॥**
**ಅನಂತರಂ ಚ ಚಿಚ್ಛೇದ ಶಿರಾಂಸಿ ಚ ಮಹಾಬಲಃ ।**
**ಬಾಹೂನಪಿ ಚ ಸಂರಬ್ಧೋ ರಾವಣಸ್ಯ ರಘೂತ್ತಮಃ ॥೫೨॥**

೫೧-೫೨. ವಿಭೀಷಣನ ಮಾತನ್ನು ಕೇಳಿ ಶೀಘ್ರಪರಾಕ್ರಮನಾದ ರಾಮನು ಪಾವಕಾಸ್ತ್ರವನ್ನು ಹೂಡಿ ರಾಕ್ಷಸನ ಹೊಕ್ಕುಳಿಗೆ ಹೊಡೆದನು. ಅನಂತರ ಆ ಮಹಾಬಲಶಾಲಿಯು ತಲೆಗಳನ್ನು ಕತ್ತರಿಸಿದನು. ಮತ್ತು ಮುಂದುವರೆದವನಾಗಿ ಆ ರಘುಶ್ರೇಷ್ಠನು ರಾವಣನ ತೋಳುಗಳನ್ನೂ ತುಂಡು ಮಾಡಿದನು.

**ತತೋ ಘೋರಾಂ ಮಹಾಶಕ್ತಿಮಾದಾಯ ದಶಕಂಧರಃ ।**
**ವಿಭೀಷಣವಧಾರ್ಥಾಯ ಚಿಕ್ಷೇಪ ಕ್ರೋಧವಿಹ್ವಲಃ ॥೫೩॥**
**ಚಿಚ್ಛೇದ ರಾಘವೋ ಬಾಣೈಃ ತಾಂ ಶಿತೈರ್ಹೇಮಭೂಷಿತೈಃ ।**
**ದಶಗ್ರೀವಶಿರಚ್ಛೇದಾತ್ ತದಾ ತೇಜೋ ವಿನಿರ್ಗತಮ್ ॥೫೪॥**
**ಗ್ಲಾನರೂಪೋ ಬಭೂವಾಥ ಛಿನ್ನೈಃ ಶೀರ್ಷೈಃ ಭಯಂಕರೈಃ ।**
**ಏಕೇನ ಮುಖ್ಯಶಿರಸಾ ಬಾಹುಭ್ಯಾಂ ರಾವಣೋ ಬಭೌ ॥೫೫॥**

Therefore, the statement that Avidya is established by Intuition and not by Pramaana or empirical means is quite proper.

---

### XII. The Dealings of Pramaana and Prameya are in the Region of Avidya.

Question : What is determined by the right means of knowledge alone is believed to be real by the people, is it not ? That being so, how is it proper ( reasonable ) to say that the dealings of the right means of perception, (the perceived objects) etc. is through Avidya or ignorance ?

Answer : Here this doubt has arisen because you have forgotten the technical significance or meaning of the word 'Avidya'. The notions, viz. 1. 'That knowledge born out of the right means or Pramaana is Vidya or right knowledge' ; 2. 'The knowledge which is the object of improper means (Apramaana) – i.e. lack of knowledge, doubtful knowledge, misconceived knowledge – that knowledge of a thing which is the object of these aforesaid three qualities is Avidya', entertained in empirical dealings are not false. But *in Vedaanta the word 'Avidya' is technically used with the (special) meaning of mutual Adhyaasa or super imposition of Atman and un-Atman. Here both the Vidya (right knowledge) and the Avidya (improper or misconceived knowledge) which arise in the empi-*

*rical dealings are treated as Avidya (innate ingnorance of the essential nature of Atman) (the Ultimate Reality) alone ; the determination of the essential true nature of Atman or the Self alone is called Vidya, the right knowledge.* Just as in the dream both the conceptions distinguished as 'this is the right knowledge' and 'this is the false knowledge' are included in the dream alone and from the standpoint of the waking they both become Avidya alone or false knowledge alone, similarly when viewed from the standpoint of the non-dual nature of Atman or the Intuitive vision of non-dual Self, both the knowledge born out of Pramaana or the right means and the knowledge which is not produced by proper means or which is contrary (opposed) to that by right means are Avidya only. There is no contradiction at all in stating this fact.

Let us now try to determine how the whole range of empirical dealings using the right means are through Avidya or this innate ignorance (of the nature of superimposition or misconception between Atman and un-Atman) alone, with the help of the following statement by Sri Shankara : *' Dehendriyaadishu Aham Mamaabhimaanarahitasya Pramaatrutwaanuprapattou Pramaanapravruttyanupapattehe "* – 'After making this composite statement, Sri Shankara has himself explained the import of the statement. Here it is self-evident that because the fact, that the Pramaanas (the right means) etc. are projected by Avidya or innate ignorance, is itself to

be established, Sri Shankara has not exemplified or illustrated any Pramaanas or right means whatsoever in this statement. The reason is, proceeding to determine the veracity or true nature of a Pramaana by another Pramaana alone gives room for the logical defect of 'Aatmaashraya' (proceeding to establish one by oneself). In the statement – 'I am telling the truth, because I am myself saying like that' – it amounts to one proceeding to establish one's own qualifications and hence it becomes unsustainable. Similarly, to try to determine the true nature or veracity of one Pramaana or right means with the help of another Pramaana alone is as ridiculous as saying : 'I sat on my own shoulders'. Therefore, Sri Shankara has not illustrated here any Pramaana whatsoever ; it should be understood that he has implied that intuitive experience alone is the basis for the device used here. The gist of the explanation by Sri Shankara is : The senses alone are called Pratyaksha Pramaana or direct means and the intuitive experience born out of them alone is called Pratyakshajnaana or direct knowledge or perceptive knowledge. All the Pramaanas or means of knowledge like Anumaana (guessing), Upamaana (illustration), Shabda (the word or statement of a reliable person), Arthaapatti (the maxims of the type of – if a man is supposed to be fasting but does not lose weight, then it is deduced that he must be eating surreptitiously), Anupalabdhi (if a thing is not available anywhere in the world it is deduced that it does not ever exist) – follow in the wake of the sensory

perceptions, and hence it is evident that all the dealings of using Pramaanas or right means of knowledge is born out of the sensory perception. For those senses the body is essential as the abode. Therefore, before saying that I am using the senses as the Pramaanas or right means there must be the Adhyaasa or superimposition of the nature of 'I am the body'. Only after all these conditions are fulfilled one is called *Pramaatru or the perceiver,* is it not? Therefore, *Pramaatrutwa or perceivership is born out of Avidya or innate ignorance of the nature of Adhyaasa or superimposition of the body and the senses on Atman; hence, it is evident that the Pramaana Vyavahaara or the empirical dealings of using right means born out of Pramaatrutwa or perceivership is the resultant of Avidya or innate ignorance.*

Question : Why should it not be assumed that when people are indulging in the dealings of perception etc. they do so inspite of knowing that they are apart from the body, the senses etc. ? Why should it be taken that they carry on the transactions by being so stupid as to consider that they are the bodies and the senses are possessed by them ?

Answer : This will become clear when it is examined how people indulge in the transactions of perception etc. Sri Shankara has clarified this by a statement : "*Pashvaadibhishchaavisheshaat*", meaning, just as the creatures, birds and animals are carrying on their empirical transactions. The creatures, birds

and animals proceed forward if, after the knowledge of an object is gained through the means of the senses, they feel 'this is desirable'; if they feel 'this is undesirable' they recede. For example, if the creatures etc. notice a man holding in his hand green grass, they proceed towards him, but if they notice a man holding aloft a big stick, they recede away from him. However, there is no restriction that when they behave in this manner it should be really green grass or one who holds aloft the big stick should be a real man only. We have seen birds which proceed to peck at grapes drawn in a picture with a view to eating them or looking at a doll made in the shape of a man and erected in a field, the birds fly away from there, is it not ? Therefore, it is clear that the behaviour of creatures, birds and animals is not based on discriminative knowledge. *Similarly, it has to be concluded that because it is seen that human beings too proceed forward towards a tin plate piece to pick it up expecting it to be a rupee coin, recede from a rope seen from a distance as a snake and indulge in such other transactions, human beings also, like the creatures, birds and animals, by nature have the behaviour of proceeding forward towards a thing, thinking it to be good, and of receding from a thing, thinking it to be bad. Therefore, it has to be concluded that for human beings the dealings of the nature of proceeding forward and receding which are born out of perceptions etc. are at the time of those transactions carried on through a lack of discrimination and only naturally,*

*just like the dealings of the creatures, birds etc. only.* Hence it can be surmised that just as the dealings born out of the knowledge of the object (Prameya) are the result of a lack of discrimination, in the same way the dealings of the form of agentship and enjoyership which are caused in the nature of the perceiver are also caused by a lack of discrimination.

---

### XIII. Scriptural Transactions Are Also Prompted By Avidya Only.

Question : It may be true in the world the dealings of proceeding forward (Pravrutti) and receding (Nivrutti) of common people are through a lack of discrimination. But why should it be concluded that the discriminative examiners of external things also similarly carry on transactions ? Are there no great people who equipped with the learning of the physical sciences have acquired the knowledge of earth, water, wind and space and thereby made new discoveries? Is it proper to say that those great people, who have learnt from the scriptural texts about the superior fruits accruing to them in other worlds mentioned in the Vedas and who are performing the stipulated rites as the means for attaining those fruits, are also ignorant people ? Can it be said that such a scriptural text, which teaches about such extra - sensory fruits, is also meant for ignorant people ?

Answer : We did not say at all that there are no people who have discovered objects after inquiry, using discrimination. There is no restriction or rule that even knowledgeable people of any calibre when they enter into transaction they do so using discrimination alone. Some people may entertain such a desire of entering into transactions in that manner before they undertake those transactions; but no one can say that while such people are in the process of carrying out those transactions their progress is in consonance with their discrimination. If it were so, there would not have been people who were drowned in the sea along with the ships which they constructed, people who tumbled down from the aeroplanes and people who were dazed after flying in the air when they travelled higher beyond their capacity. Let it be; it is certain that even for those who have somewhat discriminated about the perceived object there is per force innate ignorance (Avidya) about their essential nature of Atman or the Self in empirical dealings.

Further, even those who have acquired belief that in heaven etc. they will attain the exquisite fruits and thereby who acquired the knowledge through belief (in the Shaastras or scriptural texts) that their essential nature of Atman is separate from their body, senses etc. have not truly intuited the essential nature of Atman or the Self. Because, even those people do not have the true knowledge of the essential nature of Atman as taught in Vedaanta. Sri Shankara

has written as follows with regard to this question viz. How is this essential nature of Atman, as taught in Vedaanta ?- "*Ashanaayaadyateetam, Apetabrahma. kshatraadibhedam, Asamsaaryaatmattwam*".

The following are the sentences of the Vedaantas (Upanishads) containing the characteristics indicated in the above statement : *1. Yoashanaayaapipaase Shoakam Moaham Jaraam Mrutyumatyeti" (Bri. 3-5-1). 2. "Brahma Tam Paraadaad Yoanyatraa-tmanoa Brahma Veda, Kshatram Tam Paraadaad Yoanyatraatmanoa Kshatram Veda, Loakaastam Paraa-duryoanyatraatmanoa Loakaan Veda, Devaastami Paraaduryoanyatraatmanoa Devaan Veda Bhootaani Tam Paraaduryoanyatraamanoa Bhootaani Veda, Sarvam Tam Paraadaad Yoanyatraatmanaha Sarvam Veda" (Bri. 3-4-6)*

Atman does not have the characteristics or qualities of vital force of the nature of hunger and thirst; He does not have the mental qnalities of the nature of grief and attachment; nor does He have the bodily qualities of the nature of old age and death. Because His essential nature has transcended the body, vital force (Praana) and mind, these qualities or characteristics are superimposed on or misconceived in Atman by the ignorant people, just as (ignorant) people misconceive blue colour in the sky and believe that 'the sky is blue'. This is the meaning of the first scriptural statement.